# ಕೆಲವು ತಾಯಂದರಿಗೆ ಇದು ತಿಳಿದಿರುವುದಿಲ್ಲ!

ಮಗುವಿಗೆ ಮುಜುಗರವಾಗಿದ್ದರೆ ಅಥವಾ ಒದ್ದೆ ಬಟ್ಟೆಯಿಂದ ಹಿಂಸೆಯಾಗುತ್ತಿದ್ದರೆ ಅಳದೆ ಮತ್ತೇನು ಮಾಡೀತು! ನನ್ನ ಅಮ್ಮನು ಮಾಡುವಂತೆ ನಿಮ್ಮ ಅಮ್ಮನೂ ಕೂಡ ನಿನಗೆ ಸ್ನಾನ ಮಾಡಿಸಿದ ನಂತರ ಅಥವಾ ಬಟ್ಟೆ ಬದಲಾಯಿಸಿದಾಗಲೆಲ್ಲಾ ಜಾನ್‌ಸನ್ಸ್ ಬೇಬಿಪೌಡರನ್ನು ಹಚ್ಚಬಾರದೇಕೆ? ಅದು ಪ್ರಪಂಚದಲ್ಲಿ ಅತಿ ಮೃದುವಾದ ಚರ್ಮಕ್ಕೂ ಹಿತಕರವಿರುವಂತೆ ತಯಾರಿಸಲ್ಪಟ್ಟಿದೆ. ಅದನ್ನು ಹಚ್ಚುವುದರಿಂದ ನಿನಗೆ ತುಂಬಾ ಆರಾಮವಾಗುವುದೆಂಬುದನ್ನು ನಾನುಬಲ್ಲೆ. ನಿನಗೆ ಮಾತನಾಡುವುದು ಬರುತ್ತಿದ್ದರೆ ಬಹುಶಃ ನೀನೇ ಅಮ್ಮನಿಗೆ ಹೇಳಬಹುದಿತ್ತು!



## ಅಮ್ಮ!

ಮುಜುಗರದ ಸಲುವಾಗಿ ನಿಮ್ಮ ಮಗು ಅಳುತ್ತಿದ್ದಾಗ ಜಾನ್‌ಸನ್ಸ್ ಬೇಬಿ ಪೌಡರು ಹಚ್ಚಿದರೆ ಅದರ ಚಮತ್ಕಾರವು ಕೂಡಲೆ ಕಂಡುಬರುವುದು. ಜಾನ್‌ಸನ್ಸ್ ಬೇಬಿ ಪೌಡರಿನಲ್ಲಿರುವ ವಿಶೇಷ ವಸ್ತುಗಳು ಎಂತಹ ಮೃದುವಾದ ಚರ್ಮಕ್ಕೂ ಹಿತಕರವಿರುವುದು. ಅದಕ್ಕೇನೆಯೇ ಎಷ್ಟೋ ತಾಯಂದಿರು (ತಂದೆಯರೂ ಕೂಡ) ಅದನ್ನು ತಮಗಾಗಿಯೂ ಬಳಸುತಾರೆ. ಇಂದೇ ಒಂದು ಟಿನ್ನನ್ನು ಕೊಳ್ಳಿರಿ—ಮಗುವಿಗೂ, ನಿಮಗೂ.

ಮಗುವಿಗೆ ಸರ್ವೋತ್ತಮ—ನಿಮಗೂ ಸರ್ವೋತ್ತಮ.




**Johnson's** Regd. Trade Mark

**BABY POWDER**

ಜಾನಸನ್ಸ್
ಬೇಬಿ ಪೌಡರು

ಸೋಲ್ ಡಿಸ್ಟ್ರಿಬ್ಯೂಟರುಗಳು: ಐ. ಸಿ. ಐ. (ಇಂಡಿಯಾ) ಲಿಮಿಟೆಡ್.

ಜ್ಞಾಪಕವಿರಲಿ: ಜಾನಸನ್ಸ್ 'ಪ್ರಿಕ್ಲೀ ಹೀಟ್ ಪೌಡರು' ಬೆವರು ಸಾಲೆಗೆ ಉತ್ತಮ ನಿವಾರಿಣಿ.

# ಈ ಸಂಚಿಕೆಯಲ್ಲಿ



ಇವಲ್ಲದೆ ನಗೆಹನಿ, ಪದ್ಯ, ಚುಟಕ, ಇತ್ಯಾದಿಗಳನೇಕ.

## ಚಂದಾದಾರರಿಗೆ ಸೂಚನೆಗಳು

★ ಚಂದಮಾಮಾ ಮಾಸಪತ್ರಿಕೆಯು ಪ್ರತಿ ತಿಂಗಳ ಮೊದಲನೆಯದಿನ ಪ್ರಕಟವಾಗುವುದು. ಒಡನೆಯೇ ಚಂದಾದಾರರಿಗೆ ಪೋಸ್ಟು ಮುಖಾಂತರ ಕಳಿಸಲಾಗುವುದು. ಯಾರಿಗಾದರೂ ಪ್ರತಿಯು ಸಕಾಲದಲ್ಲಿ, ಹೆಚ್ಚೆಂದರೆ 7 ನೇ ತಾರೀಖಿನೊಳಗೆ ತಲಪದಿದ್ದಲ್ಲಿ ಕೂಡಲೇ ಸಂಬಂಧಪಟ್ಟ ಸ್ಥಳೀಯ ಪೋಸ್ಟ್ ಆಫೀಸಿನಲ್ಲಿ ವಿಚಾರಿಸಿ ಆಮೇಲೆ ನಮಗೆ ತಡಮಾಡದೆ ತಿಳಿಸಬೇಕು.

★ ಅಂತಹ ದೂರು ನಮ್ಮ ಕೈಗೆ ಆಯಾತಿಂಗಳ 10 ನೇ ತಾರೀಖಿನೊಳಗೆ ತಲಪಬೇಕು. ತಡವಾಗಿ ಬಂದ ಪತ್ರಗಳನ್ನು ಗಮನಿಸಲಾಗುವುದಿಲ್ಲ.

★ ಚಂದಾದಾರರು ಬರೆಯುವ ಯಾವ ಪತ್ರದಲ್ಲೇ ಆಗಲೀ ತಮ್ಮ ಚಂದಾ ಸಂಖ್ಯೆಯನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಇದು ಬಹಳ ಮುಖ್ಯ. ತಮ್ಮ ಚಂದಾ ಸಂಖ್ಯೆ ನಮೂದಿಸದೆ ಬರೆಯುವ ಚಂದಾದಾರರ ಪತ್ರಗಳನ್ನು ಗಮನಿಸುವುದು ಸಾಧ್ಯವಿಲ್ಲ.

★ ಅಂತಹ ಚಂದಾ ಸಂಖ್ಯೆ ಪ್ರತಿ ಚಂದಾದಾರರಿಗೂ ಅವರ ಚಂದಾ ಹಣ ಸಂದಬಗ್ಗೆ ಬರೆದ ಕಾರ್ಡಿನಲ್ಲೂ, ಅವರಿಗೆ ಪ್ರತಿಸಲ ಕಳಿಸುವ ಚಂದಮಾಮದ ಸುತ್ತು ಕಾಗದದ ಮೇಲೂ ಬರೆಯಲ್ಪಟ್ಟಿರುತ್ತೆ.

★ ನಾವು ಪ್ರತಿಯನ್ನು ಅಂಚೆಮೂಲಕ ಕಳಿಸಿದಮೇಲೆ ಅವು ಚಂದಾದಾರರನ್ನು ಸೇರದಿದ್ದರೆ ಅದಕ್ಕೆ ನಾವು ಜವಾಬ್ದಾರರಲ್ಲ. ಆದರೆ ಚಂದಾದಾರರು ಅವಶ್ಯವಿದ್ದಷ್ಟು ಹೆಚ್ಚು ಹಣ ಕೊಟ್ಟು ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್‌ನಲ್ಲಿಯಾಗಲೀ ರಿಜಿಸ್ಟರ್ಡ್ ಪೋಸ್ಟಿನಲ್ಲಾಗಲಿ ಪ್ರತಿ ತರಿಸಿಕೊಳ್ಳಬಹುದು

**CHANDAMAMA**

# ಹೆಲ್ತ್ ಸೀಲುಗಳನ್ನು ಕೊಳ್ಳಿರಿ



ಪ್ರತಿ ಜನಾಂಗಕ್ಕೂ ಅದರ ಆರೋಗ್ಯ ಅತಿ ಮುಖ್ಯವಾದುದು. ನಮ್ಮ ದೇಶದಲ್ಲಿ ಇನ್ನೂ ಅನೇಕ ಕ್ಷೇತ್ರಗಳಲ್ಲಿರುವಂತೆ ಆರೋಗ್ಯವಿಷಯಿಕ ಸೇವೆಯೂ ಸಹ ಅವಶ್ಯಕವಿದ್ದಷ್ಟು ಉತ್ತಮವಾಗಿಲ್ಲ ಈ ಸೇವೆ ಶೀಘ್ರವಾಗಿ ಅಭಿವೃದ್ಧಿಗೊಳಿಸಬೇಕು. ಆದರೆ ನಮ್ಮ ಆರ್ಥಿಕ ಮುಗ್ಗಟ್ಟಿನಿಂದ ಅದು ಅಸಾಧ್ಯವಾಗಿ ನಿಂತಿದೆ.

ಆದುದರಿಂದ ದೇಶದ ಪ್ರಜೆಗಳೂ ಪ್ರಭುತ್ವವೂ ಒಂದಾಗಿ ಸಹಕರಿಸಿ ಈ ಕುಂದನ್ನು ಪರಿಹರಿಸಬೇಕಾಗಿದೆ. ಅನೇಕ ದೇಶಗಳಲ್ಲಿ ಆರೋಗ್ಯಾಭಿವೃದ್ಧಿಗೆ ಸಹಾಯಕ ಕಾರ್ಯಕಲಾಪಗಳಲ್ಲಿ ಹೆಲ್ತ್ ಸೀಲುಗಳೂ, ಹೆಲ್ತ್ ಸ್ಟಾಂಪುಗಳೂ ಆಯಾ ಪ್ರಭುತ್ವಗಳಿಗೆ ಎಷ್ಟೋ ಸಹಾಯಕರವಾಗಿವೆ. ಹಾಗೇ ನಮ್ಮ ಭಾರತ ಸರಕಾರದ ಆರೋಗ್ಯಶಾಖೆಯೂ ಸಹ 2 ನೇ ಅಕ್ಟೋಬರು 1951 ರಿಂದ ಹೆಲ್ತ್ ಸೀಲುಗಳನ್ನು ವಿಕ್ರಯಿಸುವ ಉದ್ಯಮವನ್ನು ಪ್ರಾರಂಭಿಸಲು ನಿಶ್ಚಯಿಸಿರುತ್ತಾರೆ. ಈ ಸೀಲುಗಳು ಒಂದು ರೂಪಾಯಿ, ನಾಲ್ಕಾಣೆ, ಮತ್ತು ಒಂದಾಣೆಗಳಿಗೆ ಎಲ್ಲಾ ಪೋಸ್ಟಾಫೀಸುಗಳಲ್ಲಿಯೂ ಮಾರಲ್ಪಡುತ್ತವೆ.

ಈ ಉದ್ಯಮವನ್ನು ಪ್ರೋತ್ಸಾಹಿಸಿ ತನ್ಮೂಲಕ ದೇಶದ ರೋಗಗ್ರಸ್ತ ಜನತೆಯ ಬಾಧಾನಿವೃತ್ತಿಗೆ ಸಹಕರಿಸುವಂತೆ ಪ್ರತಿಯೊಬ್ಬರನ್ನೂ ಕೋರುತ್ತೇನೆ. ಒಂದು ಒಳ್ಳೆಯ ಕಾರಣಕ್ಕಾಗಿ ಅಪ್ರಯತ್ನಿತವಾಗಿ ಶ್ರಮಿಸುವುದು ಯೋಗ್ಯವಾದ ಕೆಲಸ. ಪೂರ್ತಿ ಸಹಕಾರ ಲಭಿಸುತ್ತದೆಂದು ನಾನು ನಂಬಿದ್ದೇನೆ.

ಅಮೃತ್‌ಕೌರ್,
ಆರೋಗ್ಯಶಾಖಾ ಮಂತ್ರಿ,
ಭಾರತ ಸರಕಾರ.

---

ಭಾರತ ಸರಕಾರದ ಆರೋಗ್ಯಶಾಖಾ ಮಂತ್ರಿ ವರ್ಗದವರಿಂದ ಪ್ರಚುರಿಸಲ್ಪಟ್ಟಿದು.
ಎಂ. ಎ. ಪಿ. ಇಂಡಸ್ಟ್ರೀಸ್‌ನವರ ಸೌಹಾರ್ದತೆಯಿಂದ ಪ್ರಕಟಿಸಲ್ಪಟ್ಟಿದು.



# ಚಂದಮಾಮ

ಮಕ್ಕಳ ಕಥೆಯ ಮಾಸಪತ್ರಿಕೆ

## ಭರತಮಾತೆಯ ಸೇವಕನು !

ಕೈಪಿಡಿದು ಕುರುಡರನು ಯಾರು ನಡೆಸುವನೋ
ಅಳುವವರ ಕಣ್ಣೀರ ಯಾರು ಒರಸುವನೋ
ಬಡವರಾ ಕಷ್ಟವನು ಯಾರು ತಿಳಿಯುವನೋ
ಅಬಲರಿಗೆ ಬಲವನ್ನು ಯಾರು ನೀಡುವನೋ
ರೋಗಾರ್ತರಿಗೆ ಯಾರು ಆಧಾರವಹನೋ
ಶರಣು ಬಂದಿಹ ಜನರ ಯಾರು ಕಾಯುವನೋ
ಪ್ರಾಣಿಹಿಂಸೆಯ ಯಾರು ತಡೆದು ನಿಲ್ಲಿಪನೋ
ಮಾನಿನಿಯ ಮಾನವನು ಯಾರು ರಕ್ಷಿಪನೋ
ಸರ್ವದಾ ಸತ್ಯವನು ಯಾರು ಪೇಳುವನೋ
ಸೇವೆಯೇ ಧರ್ಮವೆಂದಾರು ತಿಳಿಯುವನೋ
ದೇಶಸೇವೆಗೆ ಯಾರು ತನುವ ನೀಡುವನೋ
ಈಶನನು ಭಕ್ತಿಯಿಂದಾರು ಪೂಜಿಪನೋ
ಜನ್ಮದಾತೆಯ ಭಾಗ್ಯವರ್ಧಕನೇ ಅವನು!
ಭರತಮಾತೆಯ ಸುತನು! ಸತ್ಯಸೇವಕನು!!

ಅಮ್ಮೆಂಬಳ ಅನಂತಯ್ಯ, ನಾವಡ.

ಡಿಸೆಂಬರ್
೧೯೫೧

ಸಂಪುಟ ೨
ಸಂಚಿಕೆ ೬







# ವೀರ ಬಾಲಕ

ಹಿಂದಿನ ಹಿಂದು ಕಾಲದಲಿ
ಎರಡೂ ದೇಶದ ಜನಗಳಲಿ
ದ್ವೇಷವು ಉಕ್ಕುತ ನಡೆಯಿತು ಯುದ್ಧವು
ಭೀಕರ! ಬಲು ಭೀಕರವಾಗಿ

ಹಿಂದೆಡೆ ಯುದ್ಧವು ನೆಲದಲ್ಲಿ
ಒಂದೆಡೆ ಯುದ್ಧವು ಜಲದಲ್ಲಿ
ನಡೆಯುತಲಿತ್ತು ಅಗಣಿತ ಸೈನ್ಯವು
ಮಡಿಯಿತು ಯುದ್ಧದ ಬೇಗೆಯಲಿ

ಒಂದೆಡೆ ನೌಕೆಯ ಯಜಮಾನ
ನೊಬ್ಬನು ತನ್ನಯ ಮಗನನ್ನು
ಸಂಗಡ ಕರೆಯುತ ನೌಕೆಯೊಳಿರಿಸುತ
ಹೇಳಿದ 'ಇಲ್ಲಿಯೆ ಇರು' ಎನುತ

ಮಗನನು ಒಂದೆಡೆ ಕುಳ್ಳಿರಿಸಿ
ಹೋದನು ಕೆಲಸದಿ ಯಜಮಾನ
ಎದುರಿಗೆ ಬರುತಿಹ ಗುಂಡಿನ ಹೊಡೆತಕೆ
ಆಹುತಿಯಾಗುತ ಮಡಿದನವ

ಭೀಕರ ಯುದ್ಧದ ದೆಸೆಯಿಂದಾ
ನೌಕೆಗೆ ಬೆಂಕಿಯು ಹಿಡಿಯುವುದಾ
ಕಾಣುತ ನಾವಿಕರೆಲ್ಲರು ಹುಡುಗನ
ಕರೆದರು ಹೋಗಲು ಬೇರೆಡೆಗೆ

ಟಿ. ಚಂದ್ರರಾಜ ಸೆಟ್ಟಿ.
ಸಿದ್ಧ ಕಟ್ಟೆ.

ತಂದೆಯ ಮಾತನು ಮೀರುವನೆ?
ಅನ್ಯರು ಕರೆದರೆ ಹೋಗುವನೆ?
ಉರಿಯುವ ನೌಕೆಯಲೊಬ್ಬನ ಬಿಡುತಲಿ
ಸರಿಯುತ ಪೋದರು ನಾವಿಕರು

ಹತ್ತಿರ ಬಂದಿತು ಬೆಂಕಿಯ ಜ್ವಾಲೆಯು
ಹೆದರುತ ಹುಡುಗನು ತಂದೆಯನು
ಕೂಗುತ ಕರೆದನು "ತಂದೆಯೆ ನನಗೆ
ಹೋಗಲು ಅಪ್ಪಣೆ ನೀಡುವೆಯಾ?"

"ಢುಂ! ಢುಂ!!" ಎನ್ನುವ ಗುಂಡುಗಳಾ
ಶಬ್ದವೆ ಮಾರುತ್ತರವಾಯ್ತು
ಉರಿಯುವ ಬೆಂಕಿಯು ದಿಗಂತಕೇರಿತು
ಜ್ವಾಲೆಯು ವೇಗದಿ ಹಬ್ಬಿತ್ತು

"ಪಿತನೇ ಅಪ್ಪಣೆ ಕೊಡಬಹುದೇ?
ನಾನಿಲ್ಲಿಂದೇಳಲು ಬಹುದೇ?"
ಎನುತಿರೆ ಬೆಂಕಿಯು ಅಂಗಿಗೆ ಹಿಡಿಯುತ
ದಹಿಸಿತು ಬಾಲನ ದೇಹವನು

"ತಂದೆಯೆ ಅಪ್ಪಣೆ ಕೊಡಬಹುದೇ?"
ಎನುತಲೆ ಮಡಿದನು ಬಾಲಕನು
ಅಪ್ಪಣೆ ಪಾಲಿಸಿ ಅಸುವನು ನೀಗಿ
ಚಿರಾಯು ಕೀರ್ತಿಯ ಗಳಿಸಿದನು








ಒಂದು ಮನೆಯ ಮುಂದೆ ಆರು ವರ್ಷದ ಬಾಲಕನೊಬ್ಬನು ತಾಯಿಯ ಬಳಿ ಆಟ ಆಡಿಕೊಳ್ಳುತ್ತಿದ್ದ. ಅವನೊಂದಿಗಿದ್ದ ಸ್ನೇಹಿತ ಎಂಟು ವರ್ಷದವನೂ ಸಹ ಆಡಿಕೊಳ್ಳುತ್ತಿದ್ದ. ಅವರು ಆಡಿಕೊಳ್ಳುತ್ತಿರುವಾಗ ತಾಯಿ ಮನೆಯೊಳಕ್ಕೆ ಹೋಗಿ ಎರಡು ರೊಟ್ಟಿ ಚೂರುಗಳನ್ನು ತೆಗೆದುಕೊಂಡು ಬಂದಳು. "ಮಗೂ ಈ ಚೂರು ನೀನು ತೆಗೆದುಕೊ, ಅದನ್ನು ನಿನ್ನ ಗೆಳೆಯನಿಗೆ ಕೊಡು" ಎಂದು ದೊಡ್ಡ ಚೂರನ್ನು ಮಗನಿಗೂ, ಸಣ್ಣ ಚೂರನ್ನು ಜೊತೆ ಹುಡುಗನಿಗೂ ಕೊಡುವ ಅಭಿಪ್ರಾಯದಿಂದ ಕೊಟ್ಟಳು.

ಆದರೆ ಆಕೆ ಅಂದುಕೊಂಡಿದ್ದಂತೆ ಆಗಲಿಲ್ಲ. ಆತನು ದೊಡ್ಡ ಚೂರನ್ನು ತನ್ನ ಸಂಗಡಿಗನಿಗೆ ಕೊಟ್ಟು, ಚಿಕ್ಕ ಚೂರನ್ನು ತಾನು ಬಾಯಿಯಲ್ಲಿ ಹಾಕಿಕೊಂಡ. ಇದನ್ನು ಕಂಡು ತಾಯಿ ಆಶ್ಚರ್ಯಗೊಂಡಳು, "ಇದೇಕೋ ಮಗು, ಹಾಗೆ ಮಾಡಿದೆ? ದೊಡ್ಡ ಚೂರನ್ನು ನೀನು ತೆಗೆದುಕೋ ಅಂತ ಅಂದರೆ ಆ ಹುಡುಗನಿಗೆ ಕೊಟ್ಟೆಯಲ್ಲಾ!" ಎಂದು ಕೇಳಿದಳು. ಅದಕ್ಕೆ ಆ ಹುಡುಗ "ಅಮ್ಮಾ, ಈ ಹುಡುಗನನ್ನು ಅಣ್ಣನಂತೆ ನೋಡಬೇಕೆಂದು ನೀನು ಹೇಳಿದ್ದೆಯಲ್ಲಾ ಜ್ಞಾಪಕವಿಲ್ಲವೇ? ನ್ಯಾಯದ ಪ್ರಕಾರ ದೊಡ್ಡವನಿಗೆ ದೊಡ್ಡ ಚೂರು, ಚಿಕ್ಕವನಿಗೆ ಚಿಕ್ಕ ಚೂರು, ಅಲ್ಲವೇ? ಇದರಲ್ಲಿ ಆಶ್ಚರ್ಯವಾದರೂ ಏನಿದೆ?" ಎಂದು ಕೇಳಿದ.

ಈ ಮಾತುಗಳನ್ನು ಕೇಳಿ ಆಕೆ ತುಂಬಾ ಹರ್ಷಗೊಂಡಳು. ಅಷ್ಟು ಸಣ್ಣ ವಯಸ್ಸಿನಲ್ಲಿ ನ್ಯಾಯಾನ್ಯಾಯ ವಿಚಕ್ಷಣೆಯುಂಟಾಗುವುದೂ, ಅಣ್ಣನೆಂದು ಎಣಿಸಿಕೊಂಡ ಹಿರಿಯನಿಗೆ ದೊಡ್ಡ ಚೂರನ್ನು ಕೊಟ್ಟು, ತಾನು ಸಣ್ಣ ಚೂರನ್ನು ತೆಗೆದುಕೊಳ್ಳುವುದೂ, ಆ ತಾಯಿಗೆ ಅಮಿತವಾದ ಆನಂದವನ್ನುಂಟು ಮಾಡಿತು.

ಈ ರೀತಿ ತಾಯಿಯನ್ನು ಸಂತಸಗೊಳಿಸಿ, ಆಕೆಯ ಆಶೀರ್ವಾದ ಪಡೆದ ಆ ಬಾಲಕನೇ, ಮೊದಲು ಅಧ್ಯಾಪಕನಾಗಿ, ತರುವಾಯ ಬೊಂಬಾಯಿ ಹೈಕೋರ್ಟಿನಲ್ಲಿ ನ್ಯಾಯಾಧೀಶ ಪದವಿಯನ್ನು ಅಲಂಕರಿಸಿ, ಅದ್ಭುತವಾದ, ಅಪೂರ್ವವಾದ ತೀರ್ಪುಗಳನ್ನು ಕೊಟ್ಟ, ಪ್ರತಿಭಾಶಾಲಿ, ನ್ಯಾಯಮೂರ್ತಿ ಮಹದೇವ ಗೋವಿಂದರಾನಡೆ.




ದಸರಾಹಬ್ಬದಲ್ಲಿ ಚಿಕ್ಕ ಹುಡುಗಿಯೊಬ್ಬಳು ಮನೆಯಲ್ಲಿ ಬೊಂಬೆಗಳನ್ನು ಜೋಡಿಸಿದಳು. ಆ ಪ್ರದರ್ಶನದಲ್ಲಿ ಪುದುಚೇರಿ ಬೊಂಬೆಗಳೂ, ಗಂಧದ ಬೊಂಬೆಗಳೂ, ಪ್ಲಾಸ್ಟಿಕ್ ಬೊಂಬೆಗಳೂ, ಸೆಲ್ಯೂಲಾಯಿಡ್ ಬೊಂಬೆಗಳೂ, ಮಣ್ಣಿನ ಬೊಂಬೆಗಳೂ, ವಿವಿಧ ಬೊಂಬೆಗಳು ಇದ್ದವು. ದೇವರ ವಿಗ್ರಹಗಳಿದ್ದವು. ಗಾಂಧಿ, ನೆಹರೂ ವಿಗ್ರಹಗಳಿದ್ದವು. ಪಕ್ಷಿ ಪ್ರಾಣಿಗಳ ಬೊಂಬೆಗಳೂ ಇದ್ದವು.

ಪ್ರದರ್ಶನವು ಮೆಟ್ಟಿಲು ಮೆಟ್ಟಿಲಾಗಿ ಹತ್ತು ಹಂತಗಳಿದ್ದವು. ಎರಡನೇ ಸಾಲಿನಲ್ಲಿ ಎಲ್ಲಾ ಜಂತುಗಳ ಬೊಂಬೆಗಳೇ ಇದ್ದವು.

ಆ ಚಿನ್ನಾರಿಯ ಅಮ್ಮನು ಹಬ್ಬದ ಹತ್ತು ದಿನವೂ ಏನಾದರೊದು ತಿಂಡಿ ಮಾಡುತ್ತಿದ್ದಳು. ಅಷ್ಟಮಿಯ ದಿನ ಮಿಠಾಯಿ ಮಾಡಿದಳು. ಚಿನ್ನಾರಿಗೆ ಮಿಠಾಯಿ ಅಂತ ಅಂದರೆ ತುಂಬಾ ಇಷ್ಟ. ನೋಡಲು ಬಂದವರಿಗೆ ಕೊಟ್ಟಾಗಲೆಲ್ಲಾ ತಾನೂ ಒಂದು ಉಂಡೆ ಸ್ವಾಹಾ ಮಾಡುತ್ತಿದ್ದಳು. ತಿನ್ನುವಷ್ಟುತಿಂದು, ಇನ್ನು ತಿನ್ನಲಾರದೆ ಒಂದು ಉಂಡೆ ಉಳಿಯಲು, ಅದನ್ನು ರಾತ್ರಿ ಜಂತುಗಳಿದ್ದ ಬೊಂಬೆಗಳ ಮೆಟ್ಟಿಲು ಮೇಲೆ ಬಚ್ಚಿಟ್ಟಳು. ಅವಳಿಗೆ ತಿಳಿಯದಂತೆಯೇ ನಿದ್ದೆ ಹತ್ತಿತು.

ಚಿನ್ನಾರಿಯೊಂದಿಗೆ ಬೊಂಬೆಗಳೂ ಸಹ ನಿದ್ದೆ ಹೋದವು. ಆದರೆ ಇದ್ದಕ್ಕಿದ್ದಂತೆ ಒಂದು ಗಂಟೆಯಾಗುವುದರೊಳಗಾಗಿ ಅವು ಎಚ್ಚರಗೊಂಡವು. ಎದ್ದು ನೋಡಿದರೆ ಚಿನ್ನಾರಿ ಬಚ್ಚಿಟ್ಟಿದ್ದ ಮಿಠಾಯಿ ಉಂಡೆ ಅಲ್ಲಿ ಕಾಣಿಸಲಿಲ್ಲ.

ಆ ಉಂಡೆ ಕಳುವಾಗಿರುವುದನ್ನು ಮರದ ಕುದುರೆ ಮೊಟ್ಟಮೊದಲು ಕಂಡುಹಿಡಿಯಿತು. ಕಂಡುಹಿಡಿದು ಗಾಜಿನ ಕತ್ತೆಯೊಂದಿಗೆ "ಎಂಥಾ ಕೆಲಸವಾಯಿತು ತಮ್ಮಾ! ನಮ್ಮ ಚಿನ್ನಾರಿ ಬಚ್ಚಿಟ್ಟುಕೊಂಡಿದ್ದ ಮಿಠಾಯಿ ಉಂಡೆ ಕಾಣಿಸದಲ್ಲಾ!" ಎಂದಿತು. "ಅರೆ, ಏನು ಮಾತಿದು! ಹುಲ್ಲು, ಕಾಗದ ತಿಂದು ಹೊಟ್ಟೆ ಹೊರೆಯುವ ನಾನು ಮಿಠಾಯಿಗೆ ಆಶೆ ಪಡುವೆನೇ? ಅದಲ್ಲದೆ ನಮ್ಮ ಚಿನ್ನಾರಿ ಬಚ್ಚಿಟ್ಟ ಉಂಡೆ ನಾನು ತಿನ್ನುವೆನೆ? ನಾನು ಮಾತ್ರ ಆ ಪಾಪ ಮಾಡಲಾರೆ ನನಗೆ ತಿಳಿಯದು ಅಣ್ಣಾ" ಎಂದಿತು ಕತ್ತೆ.

ಎಂ. ಟಿ. ಜಾನಕಿ, ಬೆಂಗಳೂರು.





ಅಲ್ಪ ನನ್ನ ಹೊಟ್ಟೆಯ ಯಾವ ಮೂಲೆಗೆ ಸಾಕಾಗುತ್ತೆ? 'ರೀತಿ ಕೆಟ್ಟರೂ ಫಲವಿರಬೇಕು' ಎಂದ ಹಾಗೆ ಹೊಟ್ಟೆ ತುಂಬದ ದ್ರೋಹಕ್ಕೆ ತಲೆ ಹಾಕುವೆನೇ?" ಎಂದಿತು.

"ಏನು ರಾಜರೇ ನೀವೇನಾದರೂ...." ಎಂದು ಮೃಗಗಳೆಲ್ಲಾ ಪಿಂಗಾಣಿ ಸಿಂಹದ ಕಡೆ ನೋಡಿದುವು.

"ಎಂಥಾ ಮುರ್ಖರೋ ನೀವು! ಅಗತ್ಯವಾದರೆ ಆನೆಯ ಕುಂಭಸ್ಥಳವನ್ನು ಸೀಳಿ ತಿನ್ನುವೆನೇ ಹೊರತು ನಮ್ಮ ಚಿನ್ನಾರಿ ಮುಚ್ಚಿಟ್ಟುಕೊಂಡಿದ್ದ ಮಿಠಾಯಿ ಕದಿಯುವಂತಹ ನೀಚನೇ ನಾನು?" ಎಂದು ಒಂದು ಸಾರಿ ಗರ್ಜಿಸಿತು ಸಿಂಹ.

"ಆಂಜನೇಯ ವಂಶದಲ್ಲಿ ಜನಿಸಿದ ನಾನು ಕದಿಯುವೆನೇ?" ಎಂದಿತು ಕೋತಿ. "ಆ ಆಂಜನೇಯನ ಸ್ನೇಹಿತನಾದ ಜಾಂಬುವಂತನು ನಮ್ಮ ಕುಲದ ಹಿರಿಯನಾಗಿರುವಾಗ ನಾನು ಕಳ್ಳತನ ಮಾಡುವುದುಂಟೇ?" ಎಂದಿತು ಕರಡಿ.

"ಏನು ಚಿಕ್ಕಣ್ಣ! ನೀನೇನು ಹೇಳುವೆ?" ಎಂದಿತು ಕುದುರೆ. ಅದಕ್ಕೆ ಆ ಹತ್ತಿಯ ಬೆಕ್ಕು "ಶಿವ, ಶಿವ, ಹಾಲೋ ಕೆನೆಯೋ ಆದರೆ ಆಶೆ ಪಡುವೆನೇ ಹೊರತು, ನಮ್ಮನ್ನು ನಂಬಿ ನಿದ್ದೆ ಮಾಡುತ್ತಿರುವ ಚಿನ್ನಾರಿಯ ಮಿಠಾಯಿ ಹಾರಿಸುವೆನೇ?" ಎಂದಿತು.

ಅಲ್ಲಿದ್ದ ರಬ್ಬರು ಇಲಿ ಮುಂದೆ ಬಂದು "ಚಿನ್ನಾರಿಗೆ ದ್ರೋಹವೆಣಿಸಿದ ಧೂರ್ತರು ಯಾರೋ ತಿಳಿದರೆ ಪಟಕ್ಕನೆ ಬಾಲ ಕಚ್ಚಿ ಮೂರು ತುಂಡು ಮಾಡುವೆನು" ಎಂದಿತು.

ಬಟ್ಟೆಯ ಮೊಲ ಮಣ್ಣಿನ ತೋಳವನ್ನು ಅನುಮಾನಿಸಿತು. ಈ ವಿಷಯವನ್ನರಿತ ತೋಳ "ನನಗೆ ಹಸಿವು ಹೆಚ್ಚು ಎಂಬ ಮಾತೇನೋ ನಿಜ. ಆದರೆ ಆ ಮಿಠಾಯಿಯನ್ನು ನಾನು ಮುಟ್ಟಲಿಲ್ಲ. ಏಕೆಂದರೆ ಈ

ಈ ರೀತಿ ಪ್ರತಿಯೊಬ್ಬರೂ "ನಾನಲ್ಲ" "ನಾನಲ್ಲ" ಎಂದು ಹೇಳಲು, ಕುದುರೆ ಕತ್ತೆಯೊಂದಿಗೆ "ತಮ್ಮಾ, ಕಳ್ಳನ್ಯಾರೋ ನಮ್ಮಲ್ಲೇ ಇರಬೇಕು. ಅವನನ್ನು ಕಂಡು ಹಿಡಿಯುವ ಉಪಾಯ ಯೋಚಿಸು" ಎಂದಿತು. "ಆಲೋಚಿಸುವಷ್ಟು ಬುದ್ಧಿ ನನಗೆಲ್ಲಿದೆ? ಆ ಸಾಮರ್ಥ್ಯವೆಲ್ಲಾ ನರಿಗೆ ಮಾತ್ರವಿದೆ" ಎಂದಿತು ಕತ್ತೆ.

ನರಿ ಇದನ್ನು ಕೇಳಿ "ಸಾಮರ್ಥ್ಯಕ್ಕೇನಿದೆ

ಇದರಲ್ಲಿ? ಕಳ್ಳನನ್ನು ಹಿಡಿಯಬೇಕೆಂದರೆ ಕ್ಷಣ ಮಾತ್ರದಲ್ಲಿ ಹಿಡಿದು ಕೊಡುವೆ" ಎಂದಿತು.

"ಹಿಡಿದುಕೊಡು ಮತ್ತೆ" ಎಂದವು ಎಲ್ಲಾ.

"ನೀವೆಲ್ಲಾ ಒಂದು ಸಾರಿ ಅತ್ತಕಡೆ ತಿರುಗಿ ಕಣ್ಣು ಮುಚ್ಚಿಕೊಳ್ಳಿ" ಎಂದಿತು ನರಿ. ಎಲ್ಲವೂ ಆಕಡೆ ಮುಖ ಮಾಡಿ ಕಣ್ಣು ಮುಚ್ಚಿಕೊಂಡವು. ಅವು ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿ ನರಿ ಅಲ್ಲಿದ್ದ ಗಂಧದ ಬಟ್ಟಲಿನಲ್ಲಿ ತನ್ನ ಕುಚ್ಚು ಬಾಲವನ್ನು ಅದ್ದಿ ತೆಗೆದು ಗಪ್ ಚುಪ್ ಆಗಿ ಏನೂ ತಿಳಿಯದಂತೆ ನಿಂತುಬಿಟ್ಟಿತು. ನಿಂತು ಮಿಕ್ಕ ಜಂತುಗಳೊಂದಿಗೆ "ಇನ್ನು ನೀವು ಇತ್ತ ತಿರುಗಬಹುದು. ಒಬ್ಬೊಬ್ಬರೇ ಬಂದು ನನ್ನ ಬಾಲ ಮುಟ್ಟಿರಿ. ಕಳ್ಳ ಯಾರೋ ಹೇಳುವೆನು" ಎಂದಿತು.

"ಶಹಭಾಷ್. ಒಳ್ಳೆ ಸೊಗುಸಾಗಿದೆ ಯೋಚನೆ" ಎಂದುಕೊಂಡವು ಜಂತುಗಳು. ಕುದುರೆ, ಕತ್ತೆ, ಸಿಂಹ, ಆನೆ, ಕೋತಿ ಮೊದಲಾದ ಜಂತುಗಳೆಲ್ಲಾ ಒಬ್ಬರಾದ ಮೇಲೊಬ್ಬರು ಬಂದು ನರಿಯ ಬಾಲ ಮುಟ್ಟಿ ಹೋದವು.

"ಎಲ್ಲರೂ ಹಿಡಿದುದಾಯಿತೇ?" ಎಂದು ನರಿ ಕೇಳಿತು. "ಆಯಿತು....ಕಳ್ಳ ಯಾರು ತಿಳಿಯಿತೇ" ಎಂದು ಪ್ರಾಣಿಗಳೆಲ್ಲಾ ಕೇಳಿದವು.

"ತೊಂದರೆ ಪಡಬೇಡಿ. ಈ ಸಾರಿ ಒಬ್ಬೊಬ್ಬರಾಗಿ ನನ್ನಮುಂದೆ ನಿಮ್ಮ ಕೈಯನ್ನು ತೋರಿಸಿಕೊಂಡು ಹೋಗಿ" ಎಂದಿತು ನರಿ.



"ಸರಿ" ಎಂದು ಜಂತುಗಳೆಲ್ಲಾ ಒಬ್ಬೊಬ್ಬರಾಗಿ ನರಿಗೆ ತಮ್ಮ ಕೈಗಳನ್ನು ತೋರಿಸಿದವು. ಆಗಲೇ ಅವು ತಮ್ಮ ಕೈಗಳನ್ನು ಒಂದು ಸಾರಿ ನೋಡಿಕೊಂಡಿದ್ದವು.

'ಇದೇನಿದು—ನಮ್ಮ ಕೈಗಳು ಈ ರೀತಿ ಬಣ್ಣವಾಗಿದೆ. ಸುವಾಸನೆ ಸಹ ಬರುತ್ತಿದೆಯಲ್ಲಾ' ಎಂದು ಆಶ್ಚರ್ಯಪಟ್ಟವು.

ನರಿ ಅವುಗಳ ಕೈಗಳನ್ನು ನೋಡಿ ಗಂಧವಿದ್ದ ಜಂತುವನ್ನು "ನೀನು ಕಳ್ಳನಲ್ಲ" ಎಂದು ಹೇಳಿ ಕಳುಹಿಸುತಿತ್ತು. ಎಲ್ಲ ಜಂತುಗಳು ಆ ರೀತಿ ಹಾದುಹೋದ ಮೇಲೆ ಕೊನೆಯಲ್ಲಿ ಇಲಿ ಉಳಿದಿತ್ತು.

ಇಲಿಯೂ ಸಹ ಕೈ ತೋರಿಸಿ ದಾಟಿಕೊಂಡು ಹೋಗುತ್ತಿರಲು ನರಿ "ನಿಲ್ಲು, ನೀನೇ ಕಳ್ಳಿ" ಎಂದು ಕಣ್ಣು ಕೆಂಪಗೆ ಮಾಡಿ ಕಿರಿ

ಚಿತು. ಇಲಿ ಓಡಿ ಹೋಗಲು ಹವಣಿಸಿ ತಾದರೂ ಬೆಕ್ಕು ಅದನ್ನು ಹಿಡಿದು ಕೂರಿಸಿ "ಕದಲಿದೆಯೋ, ಜಾಗ್ರತೆ! ಏನೆಂದು ತಿಳಿದಿರುವೆ, ಹಾಂ" ಎಂದಿತು.

ಕುದುರೆ ಮುಂದಕ್ಕೆ ಬಂದು "ನೀನೇಯೋ, ಚಿನ್ನಾರಿಯ ಮಿಠಾಯಿ ನುಂಗಿದ್ದು" ಎಂದು ಕೋಪದಿಂದ ಕೂಗಲು, ಇಲಿ "ಹೌದು, ನಾ...ನೇ" ಎಂದು ಮೆಲ್ಲನೆ ಕಿಚಕಿಚನೆಂದಿತು.

ಕೋತಿ ಸುಮ್ಮನಿರಲಾರದೆ ಮುಂದಕ್ಕೆ ಬಂದು "ಏನು ನಂಗನಾಚಿಯೇ ನೀನು! (ಎಂದರೆ—ಮೇಲೆ ಏನೂ ಅರಿಯದಂತಿದ್ದು ಒಳಗೆ ಕಪಟತನವಿರುವುದು) ಕಳ್ಳ ಯಾರೂಂತ ತಿಳಿದರೆ ಅದರ ಬಾಲ ಕಚ್ಚಿ ತುಂಡು ಮಾಡುತ್ತೇನೆ ಎಂದು ನೀನೇ ಅಲ್ಲವೆ ಹೇಳಿದ್ದು!" ಎಂದು ಇಲಿಯ ಬಾಲವನ್ನೇ ಬಲವಂತವಾಗಿ ತುರುಕಲು ನೋಡಿತು. ಸಿಂಹ ಆಗ ಅಡ್ಡ ಬಂದು "ನಿಲ್ಲು, ಶಿಕ್ಷೆವಿಧಿಸಬೇಕಾದುದು ನಾನು" ಎಂದು ಕೋತಿಗೆ ಆಜ್ಞಾಪಿಸಿ, ನರಿಯ ಕಡೆ ತಿರುಗಿ "ಮಂತ್ರಿ ಪುಂಗವನೇ, ಈ ಮೂಷಿಕಾಧಮನು ಚೋರನೆಂದು ನಿನಗೆ ಹೇಗೆ ತಿಳಿಯಿತು?" ಎಂದು ಕೇಳಿತು.

ನರಿ ನಗುತ್ತಾ "ಪ್ರಭೂ, ನನ್ನ ಬಾಲವನ್ನು ಎಳೆಯುವಾಗ ಕಳ್ಳರು ಯಾರೋ ತಿಳಿಯುವುದೆಂದು ಹೇಳಿದ್ದೆನಾದುದರಿಂದ ಈ ಇಲಿ ಭಯದಿಂದ ನನ್ನ ಬಾಲವನ್ನೇ ಮುಟ್ಟಲಿಲ್ಲ. ಆದರಿಂದಲೇ ನಿಮ್ಮೆಲ್ಲರಿಗೂ ಅಂಟಿಕೊಂಡ ಗಂಧ ಇದರ ಕೈಮೇಲೆ ಕಾಣಿಸಲಿಲ್ಲ. ಗಂಧವಿಲ್ಲದಿದ್ದುದರಿಂದ ಕಂಡುಹಿಡಿದೆ" ಎಂದಿತು.

ನರಿಯ ಬುದ್ಧಿವಂತಿಕೆಗೆ ಸಿಂಹ ಮೆಚ್ಚಿಕೊಂಡಿತು.

ಆತರುವಾಯ ಬೆಕ್ಕಿನೊಂದಿಗೆ "ಎಲೆ ಬೆಕ್ಕೇ, ನಮ್ಮ ಚಿನ್ನಾರಿಗೆ ದ್ರೋಹವೆಣಿಸಿದ ಈ ಕಿರಾತನಿಗೆ ಈ ಸಭೆಯಲ್ಲಿ ಇರಲು ಅರ್ಹತೆಯಿಲ್ಲ. ಅವನನ್ನು ಮೇಲಿನ ಹಂತಕ್ಕೆ ಕರೆದೊಯ್ದು, ಅಲ್ಲಿಂದ ಹಿಂದಿರುವ ಅಗಾಧ ಕೂಪದೊಳಕ್ಕೆ ತಳ್ಳಿಬಿಡು" ಎಂದಿತು. ಕೂಡಲೇ ಬೆಕ್ಕು ಆ ಕೆಲಸ ಮಾಡಿತು—ಇಲಿ ಒಂದು ಬಿಲವನ್ನು ಸೇರಿತು.






## 17

[ ಉದಯನನು ಹೇಗೋ ಗಡ್ಡದವನನ್ನು ಸಂಧಿಸಿದ. ಅಷ್ಟರಲ್ಲಿ ರಾಕ್ಷಸನೂ ಬರಲು ಒಂದು ಮಡಕೆಯೊಳಕ್ಕೆ ಸೇರಿಕೊಂಡ. ಅಲ್ಲಿ ಪ್ರತಾಪನು, ತನ್ನನ್ನು ಮದುವೆ ಯಾಗುವಂತೆ ರಾಜಕುಮಾರಿಯರನ್ನು ನಿರ್ಬಂಧಿಸಿದ. ರಾಕ್ಷಸನು ಉದಯನನ್ನು ಹಿಡಿದು ತರುವಂತೆ ನಿಶೀಥನನ್ನು ಕಳುಹಿಸಿದ. ನಂತರ—]

ಉದಯನನ್ನು ಹುಡುಕಿ, ಆತನ ಹತ್ತಿರವಿದ್ದ ಭಸ್ಮ, ಅಂಜನಗಳನ್ನು ತಂದು ತನಗೆ ಒಪ್ಪಿಸು ವಂತೆ ರಾಕ್ಷಸನು ನಿಶೀಥನನ್ನು ಬಿಡುಗಡೆ ಮಾಡಿ ಕಳುಹಿಸಿಕೊಡುವಾಗ ಹಿಂದೆ ರಾಜ ಕುಮಾರಿಯರನ್ನು ಮಾಡಿದಂತೆ ಆತನನ್ನು ಸಹ ಮೂಗನನ್ನಾಗಿ ಮಾಡಿ ಕಳುಹಿಸಿದ.

ನಿಶೀಥನು ಹೋಗಿ ಹೋಗಿ ಕಡೆಗೆ ಮಾಳವದೇಶವನ್ನು ಸೇರಿಕೊಂಡ. ಉದಯನನಿಗೂ ನಿಶೀಥನಿಗೂ ರೂಪದಲ್ಲಿ ಯಾವುದೇ ವಿಧವಾದ ವ್ಯತ್ಯಾಸವಿಲ್ಲದೆ, ಇಬ್ಬರಿಗೂ ಒಂದೇ ರೀತಿ ಹೋಲಿಕೆ ಇದ್ದಿ ತಾದಕಾರಣ ಆತನೇ ಉದಯನನೆಂದು ಕೊಂಡು ಅಲ್ಲಿಯ ಪ್ರಜೆಗಳು ತುಂಬಾ ಆದರಾಭಿಮಾನಗಳಿಂದ ತಮ್ಮ ರಾಜನ ಹತ್ತಿರಕ್ಕೆ ಕರೆದುಕೊಂಡು ಹೋದರು.

ಪ್ರತಾಪನೂ ಸಹ ಬಂದಾತನು ಉದಯನನೇ ಎಂದುಕೊಂಡ. ತಾನು ಭಸ್ಮ, ಅಂಜನಗಳನ್ನು ಲಪಟಾಯಿಸಿದುದನ್ನು ತಿಳಿದು ಪ್ರತೀಕಾರಮಾಡಿ ಅವುಗಳನ್ನು ಮತ್ತೆ ಕಿತ್ತುಕೊಂಡು ಹೋಗುವ ಉದ್ದೇಶದಿಂದ ಉದಯನನು ಬಂದಿರಬಹುದೆಂದು ಮನದಲ್ಲಿ ಭಯಗೊಂಡ. ಆದರೆ ಹೊರಗೆ ಮಾತ್ರ ಏನೂ ಅರಿಯದವನಂತೆ ನಟಿಸುತ್ತಾ "ಏನಯ್ಯಾ, ನೀನು ಹೋದ ಕಾರ್ಯ ಕಾಯೋ ಹಣ್ಣೋ?" ಎಂದು ಪ್ರಶ್ನೆ ಮಾಡಿದ.



ಆ ದೇಶಕ್ಕೆ ತಾನು ಹಿಂದೆ ಎಂದೂ ಬಾರದಿದ್ದರೂ ಸಹ, ಅಲ್ಲಿನ ಪ್ರಜೆಗಳೂ, ರಾಜನೂ ತನ್ನನ್ನು ಈ ರೀತಿ ಆದರಾಭಿಮಾನಗಳಿಂದ ಏಕೆ ಕಾಣುತ್ತಿರುವರೋ ನಿಶೀಥನಿಗೆ ಅರ್ಥವಾಗಲಿಲ್ಲ. 'ನೀವು ಪ್ರಾಯಶಃ ನನ್ನನ್ನು ಯಾರೋ ನಿಮಗೆ ತಿಳಿದವನಂತೆ ಭಾವಿಸಿರಬಹುದು' ಎಂದು ಹೇಳವ ಎಂದರೆ ತನಗೆ ಮೂಕತನ ಪ್ರಾಪ್ತವಾಗಿದೆ. ಏನು ಮಾಡಲಿ ಎಂದು ಯೋಚಿಸಿ, ಕೊನೆಗೆ ಸಂಜ್ಞೆ ಮಾಡಿ ತಾನು ಮೂಗನೆಂದು ರಾಜನಿಗೆ ತಿಳಿಸಿದ.

ರಾಜ ಬೆಕ್ಕಸಬೆರಗಾದ. "ಅದೇನದು ಉದಯನ? ನೀನು ಹಿಂದೆ ಇಲ್ಲಿಂದ ಹೋಗುವಾಗ ಚೆನ್ನಾಗಿ ಮಾತನಾಡುತ್ತಿದ್ದೆಯಲ್ಲಾ! ಈಗ ಮೂಗನಾದೆ ಎಂದರೇನು? ತುಂಬಾ ಸೋಜಿಗವಾಗಿದೆ" ಎಂದ.

ಉದಯನನ ಹೆಸರು ರಾಜ ಯಾವಾಗ ಹೇಳಿದನೋ, ನಿಶೀಥನಿಗೆ ಎಲ್ಲಾ ಅರ್ಥವಾಯಿತು. ಬರೆಯುವ ಸಲಕರಣೆಗಳನ್ನು ತಂದು ಕೊಡುವಂತೆ ಸೂಚಿಸಿದ. ಅವು ಬಂದ ಕೂಡಲೇ ತಾನು ಉದಯನನು ಅಲ್ಲವೆಂತಲೂ, ಆತನು ತನ್ನ ಸಹೋದರನೆಂದೂ, ಆತನ ಸುಳಿವು ತಿಳಿಯದೆ ತಾನು ಆತನನ್ನು ಹುಡುಕಲು ಈ ರೀತಿ ಹೊರಟು ಬಂದಿರುವೆನೆಂತಲೂ, ತನ್ನ ಸಹೋದರನು ಇರವ ಸ್ಥಳವನ್ನು ತಿಳಿಸಿದರೆ ಸಂತೋಷಪಡುವುದಾಗಿಯೂ ಅದರಮೇಲೆ ಬರೆದು ತೋರಿಸಿದ.

ರಾಜನಿಗೆ ಆಗ ಅರ್ಥವಾಯಿತು. ತನ್ನ ಬಂಡವಾಳ ಎಲ್ಲಿ ಹೊರಬೀಳುವುದೋ ಎಂದು ಭಯಗೊಂಡ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ರಾಜನಿಗೆ ಗಂಟಲಲ್ಲಿ ಗಾಳ ಸಿಕ್ಕಿಕೊಂಡಂತಾಯಿತು 'ಹೇಗೋ ಉದಯನನನ್ನು ಮೋಸಗೊಳಿಸಿ ಭಸ್ಮ ಮತ್ತು ಅಂಜನಗಳನ್ನು ಪಡೆದು, ಅವನ ಪೀಡೆ ತೊಲಗಿಸಿಕೊಂಡು ಸಂತೋಷದಿಂದ ಇದ್ದರೆ ಇವನೊಬ್ಬ ಹಾಜರಾದನಲ್ಲಾ ಪ್ರಾರಬ್ಧ. ಉದಯನನ ವಿಷಯ ಯಥಾರ್ಥವಾಗಿ ತಿಳಿಸಿಬಿಟ್ಟರೆ ಪ್ರಮಾದ ಬಯಸಿ ತಂದುಕೊಂಡಂತೆ ಆಗುವುದು' ಎಂದುಕೊಂಡ.

ಈಗ ಪ್ರತಾಪನಿಗೆ ಮತ್ತೊಂದು ದುರ್ಬುದ್ಧಿ ಹುಟ್ಟಿತು. 'ಉದಯನನು ಹೇಗೂ ಈ ವೇಳೆಗೆ ರಾಕ್ಷಸನ ಕೈಯಲ್ಲಿ ಸಿಕ್ಕಿ ಸತ್ತುಹೋಗಿರುತ್ತಾನೆ. ಇವನನ್ನು ಹೇಗಾ




ದರೂ ಕೊನೆಗಾಣಿಸಿದರೆ, ಮೂರನೆಯವ ನೊಬ್ಬ ಉಳಿಯುತ್ತಾನೆ. ಅವನೂ ಎಂದಾ ದರೂ ನನ್ನ ಕೈಗೆ ಸಿಗದೆ ಹೋಗಲಾರ. ಆಗ ರಾಜಕುಮಾರಿಯರಿಗೆ ಬೇರೆ ಮಾರ್ಗವಿರುವು ದಿಲ್ಲ' ಎಂದು ಯೋಚಿಸಿದ.

ಈರೀತಿ ಅಂದುಕೊಂಡು ನಿಶೀಥನೊಂದಿಗೆ "ಅಯ್ಯಾ ತರುಣನೇ, ನಿಮ್ಮ ಸಹೋದರನು ಇಲ್ಲಿಗೆ ಬಂದ ಮಾತೇನೋ ನಿಜ. ಆದರೆ ಆತನು ಒಂದು ಹೊತ್ತು ಮಾತ್ರವಿಲ್ಲಿದ್ದ. ಆತರುವಾಯ ತನ್ನ ದಾರಿ ಹಿಡಿದ. ಎಲ್ಲಿಗೆ ಹೋದನೋ ನಾನರಿಯೆ. ಆದರೆ ನಿನಗೆ ಈ ಸಂದಿಗ್ಧ ಸ್ಥಿತಿಯಲ್ಲಿ ನನ್ನ ಕೈಯಿಂದ ಆಗ ಬಹುದಾದ ಸಹಾಯವನ್ನೆಲ್ಲಾ ಮಾಡುವೆನು. ಉದಯನನನ್ನು ಹುಡುಕುವುದರಲ್ಲಿ ನಿನಗೆ ಸಹಾಯ ಬೇಕಾದ ಪಕ್ಷಕ್ಕೆ. ನನ್ನ ಸೇವ ಕರು ಒಂದಿಬ್ಬರನ್ನು ನಿನ್ನೊಂದಿಗೆ ಕಳುಹಿಸಿ ಕೊಡುವೆನು" ಎಂದನು.

ಪರಮೋಪಕಾರವಾಯಿತು ಎಂದಂತೆ ನಿಶೀಥನು ರಾಜನಿಗೆ ತಲೆಬಗ್ಗಿಸಿ ನಮಸ್ಕಾರ ಮಾಡಿದ. ಆಕೂಡಲೇ ರಾಜನು ತನ್ನ ಮಂತ್ರಿ ಯನ್ನು ರಹಸ್ಯವಾಗಿ ಕರೆದು "ಈ ತರುಣನ ಸಂಗಡ ನಮ್ಮ ಭಟರಿಬ್ಬರನ್ನು ಕಳುಹಿಸು. ಊರಾಚೆ ಸೇರಿದಕೂಡಲೇ ಮೂರನೆಯವರ ಕಣ್ಣಿಗೆ ಕಾಣಿಸದಂತೆ ಇವನನ್ನು ಮುಗಿಸಿ ಬಿಡುವಂತೆ ಹೇಳು" ಎಂದು ಆಜ್ಞಾಪಿಸಿದ.

ಮಂತ್ರಿ ದಿಗ್ಭ್ರಮೆಗೊಂಡ. ಆದರೆ ರಾಜಾಜ್ಞೆ ಪಾಲಿಸದಿದ್ದರೆ ತನ್ನ ತಲೆ ಹಾರಿ ಹೋದೀತು. ಮತ್ತೇನೂ ಮಾಡಲಾರದೆ ರಾಜನ ಅಪ್ಪಣೆಯಂತೆ ಇಬ್ಬರು ಭಟರನ್ನು ನಿಶೀಥನ ಸಂಗಡ ಹಿಂಬಾಲಕರನ್ನಾಗಿ ಕಳು ಹಿಸಿಕೊಟ್ಟ.

* * *

ಇನ್ನು ಅಲ್ಲಿ ಉದಯನನ ವಿಷಯವೇನಾ ಯಿತೋ ತಿಳಿಯೋಣ. ಇನ್ನೆರಡು ದಿನಗಳಲ್ಲಿ ರಾಕ್ಷಸನು ಹಿಂತಿರುಗಿ ಬಂದು ಬಿಡುತ್ತಾನೆ. ಇಷ್ಟರಲ್ಲಿ ಅವನಿಗೆ ಅನುಮಾನವುಂಟಾಗದಂತೆ ಏನೋ ಒಂದು ಉಪಾಯ ಮಾಡಬೇಕು. ಗಡ್ಡದವನೊಂದಿಗೆ ಈ ವಿಷಯ ಪ್ರಸ್ತಾಪನೆ ಮಾಡಿದ. ಅದಕ್ಕೆ ಅವನು "ನನ್ನನ್ನು ಎಂದಿ ನಂತೆ ನೇತು ಹಾಕಿಬಿಡು. ನೀನು ಮಾತ್ರ ಅವನು ಬರುವವೇಳೆಗೆ ಯಾವುದೋ ಒಂದು ಮೂಲೆಯಲ್ಲಿ ಜಾಗರೂಕತೆಯಿಂದ ಅವಿತಿಟ್ಟು



ಕೊಂಡಿರು. ಸಮಯ ನೋಡಿ ಹೊರಗೆ ಜಾರಿಕೊ. ಆತರುವಾಯ ಮಿಕ್ಕ ಕಾವಲುಗಾರರೊಂದಿಗೆ ನೀನೂ ಕಾವಲು ಕಾಯಲು ಹೋಗಿ ನಿನ್ನ ಸಹೋದರರ ವಿಷಯ ತಿಳಿದುಕೊ. ಸದ್ಯ ಮಾಡಬೇಕಾದ ಕೆಲಸವೆಂದರೆ ಇದೇ" ಎಂದನು.

"ರಾಕ್ಷಸನು ಬಂದು ಮೂರನೇ ಮಡಕೆ ಎಲ್ಲಿ ಎಂದು ಕೇಳಿದರೆ?" ಎಂದ ಉದಯನ.

"ಅದಕ್ಕೊಂದು ಉಪಾಯವಿದೆ. ನಾವು ಈ ಮೊದಲು ಒಂದು ಕಡೆ ಜೋಡಿಸಿಟ್ಟಿದ್ದ ಮಡಕೆ ಚೂರುಗಳನ್ನೆಲ್ಲಾ ಮತ್ತೆ ತಂದು ಇಲ್ಲಿ ಹಾಕೋಣ" ಎಂದು ಸೂಚಿಸಿದ ಗಡ್ಡದವನು.

ಅದೇ ಪ್ರಕಾರ ಚೂರುಗಳನ್ನು ತಂದು ಸುರಿದರು. ರಾಕ್ಷಸನು ನಾಳೆ ಬರುವನೆಂದಾಗ ಉದಯನನು ಗಡ್ಡದವನನ್ನು ನೇತು ಹಾಕಿ, ತಾನೊಂದು ಮೂಲೆಯಲ್ಲಿ ಅವಿತಿಟ್ಟುಕೊಂಡನು.

ನೆನೆಸಿದ್ದಂತೆ ಮರುದಿನ ರಾಕ್ಷಸ ಬಂದ. ಬಾಗಿಲು ತೆಗೆದ ಕೂಡಲೇ ಮೂರನೇ ಮಡಕೆ ಚೂರು ಚೂರಾಗಿರುವುದು ಕಾಣಿಸಿತು. "ಇದು ಯಾರ ಕೆಲಸವೋ?" ಎಂದು ಬೊಬ್ಬೆಯಿಡುತ್ತಾ ಗಡ್ಡದವನ ಹತ್ತಿರಕ್ಕೆ ಬಂದನು.

ಗಡ್ಡದವನು ತೊದಲದೆ "ಜೀಯಾ, ನೇತಾಡಿ ನೇತಾಡಿ ಬೇಸರವಾಗಿ ತುಸ ಹೊತ್ತು ಜೋತಾಟವಾಡೋಣವೆಂದು ಜೋತಾಟವಾಡಿದೆ. ಆ ತೂಗಾಟದಲ್ಲಿ ನಾನು ಹೋಗಿ ಆ ಮಡಕೆಗೆ ತಲೆ ಹೊಡೆದುಕೊಂಡೆ. ಅದು ಕೆಳಗೆ ಬಿದ್ದು ಚೂರು ಚೂರಾಯಿತು. ಕ್ಷಮಿಸಬೇಕು ಪಾಮರನನ್ನು" ಎಂದನು.

"ನೀನು ಹಾಳಾಗಲಿಲ್ಲವೇಕೆ" ಎಂದು ಬೇಸರದಿಂದ ನುಡಿದ ರಾಕ್ಷಸ.

ಈ ಮಾತು ನಡೆಯುತ್ತಿರುವಾಗಲೇ ಉದಯನನು ಮೆಲ್ಲನೆ ಅಲ್ಲಿಂದ ಜಾರಿಕೊಂಡ. ಹಗಲು ಪಹರೆಯವರು ಕೊಳಕ್ಕೆ ಹೊರಡುತ್ತಿದ್ದರೆ ಅವರೊಂದಿಗೆ ತಾನೂ ಸಹ ಹೊರಟ. ತನ್ನನ್ನು ಹುಡುಕಿಕೊಂಡು ಬರಲು ನಿಶೀಥನು ರಾಕ್ಷಸನಿಂದ ಕಳುಹಿಸಲ್ಪಟ್ಟನೆಂದೂ, ಸಂಧ್ಯನೊಬ್ಬನು ಮಾತ್ರ ಕೊಳದಲ್ಲಿರುವಂತೆಯೂ

ಅಂದು ಮಾತಿನ ಸಂದರ್ಭದಲ್ಲಿ ಉದಯನನು ತಿಳಿದುಕೊಂಡ.



ಇದು ತಿಳಿದಕೂಡಲೇ ಉದಯನನು ಪೆಚ್ಚಾದ. ತಾನಿಲ್ಲಿಯೇ ಇರುವಾಗ ನಿಶೀಥನು ಎಲ್ಲೀಂತ ಹುಡುಕುವನು? ಆತನು ಎಲ್ಲಿಗೆ ಹೋಗಿರುತ್ತಾನೆ? ಹೇಗಾದರೂ ಅವನನ್ನು ಭೇಟಿ ಮಾಡಿದರೆ ಚೆನ್ನಾಗಿರುತ್ತದೆ. ಆದರೆ ಅದೆಂತು ಸಾಧ್ಯ? ಏನೂ ತೋಚಲಿಲ್ಲ. ಇದಕ್ಕೆ ಉಪಾಯ ಗಡ್ಡದವನೇ ಹೇಳಬೇಕು. ಎಂದುಕೊಂಡನು.

ಅದೇ ಪ್ರಕಾರ ಅಂದು ಸಾಯಂಕಾಲ ಮತ್ತೆ ಪಾತಾಳಗೃಹವನ್ನು ಸೇರಿಕೊಂಡ ಕೂಡಲೇ ಗಡ್ಡದವನ ಹತ್ತಿರಕ್ಕೆ ಓಡಿದ. ಆದರೆ ಅದೇನು ವಿಚಿತ್ರವೋ ಆ ಕೊಠಡಿಯ ಬಾಗಿಲು ಅಗಲವಾಗಿ ತೆರೆದಿದೆ. ಗಡ್ಡದವನೂ ಇಲ್ಲ. ರಾಕ್ಷಸನೂ ಇಲ್ಲ. ದೂಲಕ್ಕೆ ಕಟ್ಟಿದ ಹಗ್ಗ ಮಾತ್ರ ನೇತಾಡುತ್ತಿದೆ.

ಈ ದೃಶ್ಯ ಕಣ್ಣಿಗೆ ಬಿದ್ದಕೂಡಲೇ ಉದಯನನಿಗೆ ಮೂರ್ಛೆ ಬೀಳುವಂತಾಯಿತು. 'ನನ್ನ ಆಶೆ ಎಲ್ಲಾ ಗಡ್ಡದವನಲ್ಲಿಟ್ಟುಕೊಂಡು ಬಂದರೆ ಈ ರೀತಿ ಆಯಿತಲ್ಲಾ! ಅವನು ಏನಾದ? ಮತ್ತೆ ಈ ಸ್ಥಿತಿಗತಿ ನೋಡಿದರೆ ರಾಕ್ಷಸನು ಗಡ್ಡದವನನ ಮೇಲೆ ಉರಿದು ಬಿದ್ದಂತೆ ಕಾಣುವುದು. ಗ್ರಹಚಾರ ಕಡಿಮೆಯಾಗಿ ಗಡ್ಡದವನನ್ನು ಕೊಂದು ಹಾಕಿರಲಾರನಷ್ಟೇ! ಇರಲಾರದು. ಆ ರೀತಿಯಾಗಲು ಸಾಧ್ಯವೇ ಇಲ್ಲ. ಗಡ್ಡದವನು ಯಾವುದೋ ಯುಕ್ತಿ ಹೂಡಿರುತ್ತಾನೆ. ಇಲ್ಲಿಯೇ ಯಾವುದಾದರೊಂದು ಕೋಣೆಯಲ್ಲಿ ಬಂಧಿಸಲ್ಪಟ್ಟಿರಬೇಕು' ಎಂದುಕೊಂಡು ಅಲ್ಲಿರುವ ಕೋಣೆಗಳನ್ನೆಲ್ಲಾ ಸಾಲಾಗಿ ಹುಡುಕಲು ಮೊದಲು ಮಾಡಿದ.

ಆ ರೀತಿ ಹುಡುಕುತ್ತಿರುವಲ್ಲಿ ಉದಯನನ ಕಾಲು ನೆಲದ ಮೇಲಿದ್ದ ಒಂದು ಸನ್ನೆಯ ಮೇಲೆ ಬಿತ್ತು. ಆ ರೀತಿ ಬಿದ್ದ ಕೂಡಲೇ ಎದುರುಗಿದ್ದ ಗೋಡೆ ಎರಡಾಗಿ ಸೀಳಿ ಅಲ್ಲೊಂದು ದಾರಿ ಏರ್ಪಟ್ಟಿತು. ಉದಯನನು ಮುಂದೆ ಅಡಿಯಿಟ್ಟ. ಅಷ್ಟೇ. ಎರಡನೇ ಹೆಜ್ಜೆ ಇಡಲಿಲ್ಲ ಏಕೆ ಗೊತ್ತೇ? ತನಗೆದುರಾಗಿ ಒಂದು ಚಿನ್ನದ ದ್ವಾರ ಕಾಣಿಸಿತು. ಅದರ ಮೇಲಿಂದ ಮೂರು ಭೀಕರವಾದ ಸರ್ಪಗಳು ಬುಸಗುಟ್ಟುತ್ತಿದ್ದವು. ಗಡ



ದವನು ಒಳಗೆ ಇರಬಹುದೇನೋ ಎಂದುಕೊಂಡ. ಆದರೆ ಈ ಸರ್ಪಗಳಿಂದ ತಪ್ಪಿಸಿಕೊಂಡು ಹೋಗುವುದೆಂತು? ತೀವ್ರವಾಗಿ ಯೋಚಿಸಿದ. ಮಿಂಚಿನಂತೆ ಹೊಳೆಯಿತು ಒಂದು ಉಪಾಯ.

ಹಿಂದೆ ಗಡ್ಡದವನಿದ್ದ ಕೋಣೆಯಿಂದ ಮಡಕೆಯೊಂದನ್ನು ಮೆಲ್ಲನೆ ಉರುಳಿಸಿಕೊಂಡು ಬಂದ ಮಡಕೆಯೊಳಗೆ ಸೇರಿ, ಮುಚ್ಚಳ ಹಾಕಿಕೊಂಡು, ಒಂದೇ ಉರುಳಿಗೆ ಚಿನ್ನದ ದ್ವಾರವನ್ನು ಹಾದುಬಿಟ್ಟ. ಮುಚ್ಚಳ ತೆಗೆದು ನೋಡಿದ. ಮತ್ತೇನೂ ಪ್ರಮಾದವಿಲ್ಲವೆಂದು ಹೊರಗೆ ಬಂದ.

ಈ ಕೋಣೆಯನ್ನು ನೋಡಲು ಉದಯನನ ಕಣ್ಣುಗಳು ಕೋರೈಸಿದವು. ಆ ಕೊಠಡಿಯ ಗೋಡೆಗಳೂ, ನೆಲ, ಎಲ್ಲಾ ಬಂಗಾರಮಯವಾಗಿತ್ತು. ತುಸ ಹೊತ್ತು ಭ್ರಮೆಯಿಂದ ಆ ಕೋಣೆಯನ್ನೆಲ್ಲಾ ಪರಿಕಿಸುತ್ತಾ ಇದ್ದುಬಿಟ್ಟ. ಆದರೆ ಅಷ್ಟರಲ್ಲಿ ಮುಂದಿನ ಕರ್ತವ್ಯದ ವಿಷಯ ಜ್ಞಾಪಕಕ್ಕೆ ಬಂತು. ಗಡ್ಡದವನಿಗಾಗಿ ಮೂಲೆ ಮೂಲೆ ಹುಡುಕಲು ಪ್ರಾರಂಭಿಸಿದ. ಕಾಣಬರಲಿಲ್ಲ. ಆದರೆ ಆ ರೀತಿ ಹುಡುಕಾಡುತ್ತಿರುವಾಗ ಅಲ್ಲಿದ್ದ ಮತ್ತೊಂದು ಸನ್ನೆಯ ಮೇಲೆ ಆತನ ಕಾಲು ಬಿದ್ದು, ಎದುರುಗಿದ್ದ ಗೋಡೆ ಹಿಂದಿನಂತಯೇ ಇಬ್ಭಾಗವಾಗಿ ಸೀಳಿ ದಾರಿಬಿಟ್ಟಿತು. ಹಿಂದಿನಬಾರಿ ನಡೆದಂತೆಯೇ ಯಾವುದೋ ವಿಚಿತ್ರ ನಡೆಯುವುದೆಂದು ಹೆಜ್ಜೆ ಮುಂದಿಟ್ಟ.

ಈ ಸಾರಿಯೂ ಸಹ ಒಂದು ದ್ವಾರ ಕಾಣಿಸಿತು. ಆದರೆ ಇದು ಬೆಳ್ಳಿಯದ್ವಾರ. ಇದನ್ನು ಆರು ಸರ್ಪಗಳು ಕಾದುಕೊಂಡಿವೆ. ಹಿಂದೊಂದುಸಾರಿ ಉಪಾಯ ಕಂಡುಹಿಡಿದಿದ್ದನಾದುದರಿಂದ ಈ ಸಾರಿಯೂ ಸಹ ಮಡಕೆಯೊಳಗೆ ಸೇರಿ ಈ ದ್ವಾರದಿಂದಲೂ ಸಹ ತಪ್ಪಿಸಿಕೊಂಡು ಒಳಕ್ಕೆ ನುಗ್ಗಿದ.

ಆದರೆ ದುರದೃಷ್ಟವಶಾತ್ ಈಸಾರಿ ಮಡಕೆ ಉರುಳುತ್ತಾ ಹೋಗಿ ಆ ಬೆಳ್ಳಿ ಗೋಡೆಗೆ ತಗಲಿ ಚೂರುಚೂರಾಯಿತು. ಉದಯನ ಅದರಿಂದ ಹೊರಬಿದ್ದ. ಕೋಣೆಯ ನೆಲ ಮತ್ತು ಗೋಡೆ ಬೆಳ್ಳಿಯಿಂದ ಮಾಡಿತ್ತು. ಆದರೆ ಈ ಕೌತುಕವನ್ನು ನೋಡುತ್ತಾ ನಿಲ್ಲದೆ ಮುಂದಕ್ಕೆ ಹೋಗುವ ಮಾರ್ಗಕ್ಕಾಗಿ ಹುಡು

ಕಾಡಿದ. ಅಲ್ಲಿಲ್ಲಿಯೂ ಯಾವೊಂದು ಸನ್ನೆಯೂ ಕಾಣಿಸಲಿಲ್ಲ. ಆದರೆ ಕೊಠಡಿಯ ಚಾವಣಿಯಿಂದ ಒಂದು ಬೆಳ್ಳಿ ಸರಪಳಿ ನೇತಾಡುತಿತ್ತು. ಒಂದು ಸಾರಿ ಮೇಲಕ್ಕೆ ನೆಗೆದು ಅದನ್ನು ಹಿಡಿದುಕೊಂಡು ಎಳೆದ. ಎದುರಾಗಿದ್ದ ಬೆಳ್ಳಿ ಗೋಡೆ ಸೀದಾ ಮೇಲಕ್ಕೆ ಹೋಗಿ ದಾರಿ ಏರ್ಪಟ್ಟಿತು. ಒಳಗೆ ಕಾಲಿಟ್ಟ. ಈಬಾರಿಯೂ ಸಹ ಒಂದು ದ್ವಾರ ಕಾಣಿಸಿತು. ಇದು ರತ್ನಗಳಿಂದ ಹುದುಗಿಸಲ್ಪಟ್ಟಿದ್ದ ದ್ವಾರ. ಇದರ ಮೇಲಿಂದ ಹನ್ನೆರಡು ಸರ್ಪಗಳು ನೇತಾಡುತ್ತಿದ್ದವು.

ಈವರೆವಿಗೂ ಮಡಕೆಯ ಸಹಾಯದಿಂದ ಹೇಗೋ ಬಂಗಾರದ ದ್ವಾರ, ಬೆಳ್ಳಿ ದ್ವಾರ ದಾಟಿಕೊಂಡು ಬಂದಿದ್ದಾಯಿತು. ಆ ಮಡಕೆ ಈಗ ಒಡೆದು ಹೋಗಿದೆ. ಮತ್ತೇನು ದಾರಿ? ಇಂತಹ ದ್ವಾರಗಳು ಮತ್ತೆ ಇನ್ನೆಷ್ಟು ದಾಟಬೇಕೋ? ಇನ್ನೂ ಎಷ್ಟು ಪ್ರಮಾದಗಳನ್ನು ಎದುರುಗೊಳ್ಳಬೇಕೋ? ಹೋಗಲಿ, ಹಿಂತಿರುಗುವಾ ಎಂದರೆ ಬೆಳ್ಳಿದ್ವಾರದ ಹತ್ತಿರ ಆರು ಸರ್ಪಗಳೂ ಬಂಗಾರದ ದ್ವಾರದ ಹತ್ತಿರ ಮೂರು ಸರ್ಪಗಳೂ ಕಾದಿವೆ. ಅವುಗಳಿಂದ ತಪ್ಪಿಸಕೊಳ್ಳುವುದಾದರೂ ಹೇಗೆ? ಧೈರ್ಯ ಮಾಡಿ ರತ್ನದ ದ್ವಾರವನ್ನು ಪ್ರವೇಶಿಸೋಣವೆಂದರೆ ಒಂದಲ್ಲ, ಎರಡಲ್ಲ, ಹನ್ನೆರಡು ಸರ್ಪಗಳಿಂದ ತಪ್ಪಿಸಿಕೊಳ್ಳಬೇಕು. ಹೇಗೆ ಈ ಗಂಡಾಂತರ ಕಳೆಯುವುದು?




'ದೇವರೇ ಇನ್ನೇನು ಗತಿ' ಎಂದುಕೊಳ್ಳುತ್ತಾ ಆ ರತ್ನದ ಕೋಣೆಯಲ್ಲೇ ಕುಳಿತುಕೊಂಡು ತೀವ್ರವಾಗಿ ಆಲೋಚನೆ ಮಾಡುತ್ತಿದ್ದ. ಆದರೆ ಎಷ್ಟು ಆಲೋಚಿಸಿದರೂ ಪ್ರಾಣದ ಆಶೆ ಬಿಟ್ಟು ಒಳಗೆ ನುಗ್ಗುವ ಒಂದು ಉಪಾಯ ಹೊರತು ಮತ್ತೆ ಯಾವುದೂ ಸರಿ ಕಾಣಲಿಲ್ಲ. ಅಂದರೆ ಮೊದಲು ದ್ವಾರದಲ್ಲಿ ಕಾಣಿಸುತ್ತಿರುವ ಸರ್ಪಗಳನ್ನು ಸಂಹರಿಸಬೇಕು.

ಮರು ಆಲೋಚನೆಯಿಲ್ಲದೆ ಉದಯನನು ಸರ್ರನೆ ಕತ್ತಿ ಹಿರಿದು, ನೇತಾಡುತ್ತಿದ್ದ ಆ ಸರ್ಪಗಳಮೇಲೆ ಬೀಸಿದ. ಆ ಏಟಿಗೆ ಆರು ಸರ್ಪಗಳು ಹತವಾದವು. ಮತ್ತೊಂದು ಸಾರಿ ಕತ್ತಿ ಬೀಸಿದ. ಈ ಸಾರಿ ಐದು ಸರ್ಪಗಳ ತಲೆ ಕೆಳಗೆ ಉದುರಿದವು. ಒಂದು ಸರ್ಪ

ಮಾತ್ರ ಉಳಿಯಿತು. ಅದನ್ನು ಕೊಂದರೆ ಇನ್ನು ನಿರ್ಭಯವಾಗಿ ಒಳಗೆ ಪ್ರವೇಶಿಸಬಹುದಷ್ಟೇ? ಉದಯನನು ಗುರಿ ನೋಡಿ ಇನ್ನೊಂದು ಸಾರಿ ಕತ್ತಿ ಬೀಸಿದ. ಆದರೆ ಆ ಸರ್ಪ ಆ ಏಟು ತಪ್ಪಿಸಿಕೊಂಡು, ತಟಕ್ಕನೆ ಬಂದು ಉದಯನನ ಕೈಯನ್ನು ಕಚ್ಚಿತು. ಕೈಯಲ್ಲಿದ್ದ ಕತ್ತಿ ಕೆಳಗೆ ಬಿತ್ತು.

ವಿಷವೇರುತ್ತಿದೆ ಉದಯನನಿಗೆ. ಮೈಯೆಲ್ಲಾ ಬೆವರಿತು. ಆಲಸ್ಯವಾದರೆ ಪ್ರಾಣಕ್ಕೇ ಸಂಚಕಾರ ಒದಗಬಹುದು. ಉದಯನನು ಕೂಡಲೇ ಕತ್ತಿ ತೆಗೆದುಕೊಂಡು ಹಿಂದೇ ಏಟಿಗೆ ತನ್ನ ಕೈ ಕತ್ತರಿಸಿಕೊಂಡ. ಮತ್ತೊಂದು ಏಟಿಗೆ ಆ ಸರ್ಪವನ್ನೂ ಸಹ ತುಂಡರಿಸಿ ಚೆಲ್ಲಿದ. ಮರುಕ್ಷಣವೇ ಸ್ಮೃತಿ ತಪ್ಪಿ ಕುಸಿದುಬಿದ್ದ.

ಈ ರೀತಿ ತಾನೆಷ್ಟು ಹೊತ್ತು ಬಿದ್ದಿದ್ದನೋ ತಿಳಿಯದು ಉದಯನನಿಗೆ. ಮತ್ತೆ ಪ್ರಜ್ಞೆ ಬಂದಾಗ ಎದ್ದು ನೋಡಲು ಕೈಯಿಂದ ರಕ್ತ ಸುರಿದು ಅಲ್ಲೊಂದು ಸಣ್ಣ ಕೊಳವೇರ್ಪಟ್ಟಿತ್ತು. ಇನ್ನೂ ರಕ್ತ ಸುರಿಯುತ್ತಲೇ ಇದೆ.

ಉದಯನನು ಬಾಧೆ ಪಡುತ್ತಲೇ ಮುಂದೆ ಸಾಗಿದ. ಸ್ವಲ್ಪ ದೂರ ಹೋಗಲು ಒಂದು ದೊಡ್ಡ ಗುಹೆ ಕಾಣಿಸಿತು. ಅದರಲ್ಲಿ ರಾಕ್ಷಸನು ಸೇವಿಸುವ ದೇವಿಯ ವಿಗ್ರಹವಿದೆ. ದೇವಿಯ ಕೊರಳಲ್ಲಿ ನೂರೊಂದು ತಲೆಗಳ ಹಾರವಿದೆ. ಬಾಯಿಯಿಂದ ಭುಗಭುಗನೆಂದು ಜ್ವಾಲೆಗಳು ಬರುತ್ತಿವೆ. ಕಣ್ಣುಗಳಿಂದ ಜ್ಯೋತಿ, ಆ ಜ್ಯೋತಿಯಿಂದ ಕಿರಣಗಳು ಬರುತ್ತಿವೆ. ದೇವಿಯೊಂದು ಕೈ ಚಾಚಿದ್ದಾಳೆ. ಮತ್ತೊಂದು ಕೈಯಲ್ಲಿ ಒಂದು ಹದ್ದು ನಿಂತಿದೆ ದೇವಿಯ ವಿಗ್ರಹ, ಆ ವಾತಾವರಣ ತುಂಬಾ ಭಯಂಕರವಾಗಿತ್ತು.

ಆದರೂ ಉದಯನನು ಚಲಿಸಲಿಲ್ಲ. ಧೈರ್ಯವಹಿಸಿ ವಿಗ್ರಹದ ಕಡೆಗೆ ನಡೆದ. ನಾಲ್ಕು ಹೆಜ್ಜೆ ಮುಂದಿಟ್ಟನೋ ಇಲ್ಲವೋ ದೇವಿಯ ಬಾಯಿಯಿಂದ ಬ್ರಹ್ಮಾಂಡವಾದ ಹೊಗೆ ಹೊರಟು ಗುಹೆಯೆಲ್ಲಾ ಆವರಿಸಿತು. ಆ ಹೊಗೆಯಲ್ಲಿ ಉದಯನನಿಗೆ ಉಸಿರಾಡಲೂ ತಡಕಾಟವಾಯಿತು.

[ ಇನ್ನೂ ಇದೆ ]





ಈಗ ನನಗೆ ಹದಿನಾಲ್ಕು ವರ್ಷ ವಯಸ್ಸು. ನಮ್ಮ ಅಣ್ಣ ನನಗಿಂತಲೂ ನಾಲ್ಕು ವರ-ಷ ಹಿರಿಯವನು. ದೋಣಿಯಲ್ಲಿ ತಿನ್ನಲು ನಮ್ಮ ಅಜ್ಜಿ ಮಾಡಿಕೊಟ್ಟ ಹೆಸರುಬೇಳೆ ರೊಟ್ಟಿಯ ಗಂಟಿನೊಂದಿಗೆ ನಾವಿಬ್ಬರೂ ಅಮಲಾಪುರದಲ್ಲಿ ದೋಣಿ ಹತ್ತಿ ರಾಜಮಹೇಂದ್ರವರಕ್ಕೆ ಹೋಗ-ತ್ತಿದ್ದೆವು. ದೋಣಿ ಮುಕ್ಕಾಮಲ ಸೇರಿತು. ಅಲ್ಲಿ ಕೆಲವು ಚೀಲಗಳನ್ನು ತಂದು ಹಾಕಿದರು. ಹಾಗೂ ಕೆಲವರು ದೋಣಿಯಲ್ಲಿ ಹತ್ತಿದರು. ಅವರಲ್ಲಿ ಉದ್ದನೆಯ ತೆಳ್ಳನೆಯ ಮನುಷ್ಯನೊಬ್ಬನಿದ್ದ.

ಆತನನ್ನು ಕಂಡ ಕೂಡಲೇ ದೋಣಿಯಲ್ಲಿದ್ದ ಕೆಲವರು "ಬನ್ನೀ ಪೇರ್ರಾಜುಗಾರೂ" ಎಂದು ಸ್ವಾಗತಿಸಿದರು.

"ಬಲೆ ತಮಾಷೆ ಮನುಷ್ಯ, ಚಿತ್ರವಿಚಿತ್ರವಾದ ಕಥೆಗಳು ಈತನಿಗೆಷ್ಟೋ ಬರುತ್ತವೆ" ಎಂದು ನನ್ನ ಪಕ್ಕದಲ್ಲಿ ಕುಳಿತಿದ್ದ ಮೀಸೆಮರಿಯಣ್ಣ ಹೇಳಿ, "ರಾಯರೇ, ತುಂಬಾ ಚಮತ್ಕಾರವಾದ ವಿಷಯ ಯಾವುದಾದರೂ ಹೇಳಿ" ಎಂದು ಕೇಳಿದ. ಆತನು "ಸರಿ" ಎಂದು ಸರಿಯಾಗಿ ಕುಳಿತುಕೊಂಡು ಈರೀತಿ ಪ್ರಾರಂಭಿಸಿದ.

"ಇದೊಂದು ತುಂಬಾ ವಿಚಿತ್ರವಾದ ವಿಷಯ. ಎಲ್ಲಾ ಕೇಳಿ. ನಾನು ಆಗ ಅಮೇರಿಕಾದಲ್ಲಿದ್ದೆ. ಅಮೇರಿಕಾದಲ್ಲಿ ಮನೆ ಬಾಡಿಗೆ ನಮ್ಮ ದೇಶಕ್ಕಿಂತಲೂ ತುಂಬಾ ದುಬಾರಿಯಾದುದುರಿಂದ, ನಾನೂ ದೊಡ್ಡ ಭವನದಲ್ಲಿ ಇಳಿದುಕೊಳ್ಳದೆ, ಒಂದು ಹಳೇ ಮನೆಯ ಕೋಣೆಯೊಂದನ್ನು ಕಡಿಮೆ ಬಾಡಿಗೆಗೆ ಹಿಡಿದು ಅದರಲ್ಲಿ ತಂಗಿದೆ.

ಅಲ್ಲಿಗೆ ಹೋದ ಹೊಸದರಲ್ಲಿ ನೀರೂ, ಆಹಾರ ನನ್ನ ಶರೀರಕ್ಕೆ ಒಗ್ಗದೆ ಅನಾರೋಗ್ಯವುಂಟಾಯಿತು. ಜ್ವರ ಬಂದು ಹದಿನೈದು ದಿನ ಹಾಸಿಗೆ ಹಿಡಿದೆ. ಆ ಹದಿನೈದು ದಿನ ನನ್ನ ಪ್ರಪಂಚವೆಲ್ಲಾ ಆ ನಾಲ್ಕು ಗೋಡೆಗಳ ಮಧ್ಯವೇ ಇತ್ತು. ಈ ಮನೆಗೆ ಎಂದು ಬಳಿದಿದ್ದರೋ ಸುಣ್ಣ! ಗೋಡೆಯಮೇಲೆ ಅಲ್ಲಲ್ಲಿ ಗಾರೆ ಪದರ ಕಿತ್ತುಹೋಗಿ, ವಿವಿಧ ಆಕಾರಗಳೇರ್ಪಟ್ಟಿದ್ದುವು. ಅವುಗಳಲ್ಲಿ ಒಂದು ಆಕಾರ ಪೂರಾ ಮನುಷ್ಯನಂತೆ

'ತೆಲುಗಿನಿಂದ'



ಕಾಣಿಸಿತು. ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಲು, ಗಾರೆಕಿತ್ತುಹೋದ ಆ ಸ್ಥಳ ಮನುಷ್ಯನಂತೆ ಇದ್ದುದು ಮಾತ್ರವೇ ಅಲ್ಲದೆ, ನಾನು ನಮ್ಮೂರಿನಲ್ಲಿ ಚಿಕ್ಕಂದಿನಿಂದ ಅರಿತಿದ್ದ ಕೋಟೇಶ್ವರ ಕೋಟಯ್ಯ ಶೆಟ್ಟಿಯನ್ನು ಹೋಲುತಿತ್ತು. ಭಾರಿ ಕುಂಬಳಕಾಯಿಯಂಥ ಬೊಜ್ಜು ಆತನದು. ದೊಡ್ಡದೊಂದು ಚಿಟಿಕಿ ನಸ್ಯ ಹಿಡಿಯುವ ಮೂಗು. ಇನಿತಾದರೂ ಬೇಧವಿಲ್ಲದೆ ಇವೆಲ್ಲಾ ಆ ಗೋಡೆಯ ಮೇಲಿದ್ದ ಬೊಂಬೆಯಲ್ಲಿ ಪ್ರತ್ಯಕ್ಷವಾಯಿತು.

ಎಲ್ಲಿಯ ಮುಕ್ಕಾಮಲ! ಎಲ್ಲಿಯ ಅಮೇರಿಕಾ!! ಇವುಗಳ ಮಧ್ಯ ಅನೇಕ ಸಾವಿರ ಮೈಲುಗಳ ಅಂತರವಿದೆ. ನಾನೇನೋ ಇಷ್ಟುದೂರ ಲಕ್ಷ್ಯಮಾಡದೆ ಬಂದೆ, ಆದರೆ ನಮ್ಮ ಕೋಟಯ್ಯ ಶೆಟ್ಟಿ ಎಂದೂ ಊರು ಬಿಟ್ಟು ಕದಲುವ ಆಸಾಮಿಯೇ ಅಲ್ಲ. ಆತನೇ ಕದಲದೆ ಇರುವಾಗ ಆತನ ಚಿತ್ರ ಇಷ್ಟು ದೂರ ಬಂದು ಈ ಕೋಣೆಯ ಗೋಡೆಯ ಮೇಲೆ ಹೇಗೆ ಕಾಣಿಸಿಕೊಂಡಿತೋ ನನಗೆ ಸಮಸ್ಯೆಯಾಗಿ ಉಳಿಯಿತು. ಏನಿದು ವಿಚಿತ್ರ ಎಂದು ಆಶ್ಚರ್ಯದಿಂದ ಚಿತ್ರದಕ ನೋಡಿದೆ. ಮೊದಲನೇ ದಿನ ಕುಳಿತಿರು ವಂತೆ ಕಂಡುಬಂದ ಚಿತ್ರ, ಮರುದಿನ ನಾನು ಮಲಗಿಕೊಂಡಿರುವಂತೆಯೇ, ಕಾಲು ಚಾಚಿ ಮಂಚದ ಮೇಲೆ ಪವಡಿಸಿದಂತೆ ಕಾಣಿಸಿತು. ಇದು ಮತ್ತಷ್ಟು ಸೋಜಿಗವಾಗಿ ಕಾಣಿಸಿತು. ಆ ಕೋಣೆಯೊಳಕ್ಕೆ ಒಬ್ಬ ಸೇವಕನು ಹೊರತು ಮತ್ತೆ ಯಾರೂ ಪ್ರವೇಶಿಸುವುದಿಲ್ಲ. "ಈ ಚಿತ್ರವನ್ನು ನೀನೇನಾದರೂ ಮುಟ್ಟಿದೆಯಾ?" ಎಂದು ಅವನನ್ನು ಕೇಳಿದೆ. ಅದಕ್ಕೆ ಇಲ್ಲವೆಂದು ಉತ್ತರ ಬಂತು. ನನಗೇನೂ ತೋರಲಿಲ್ಲ. ಆ ಚಿತ್ರದಕಡೆ ಹಾಗೇ ನೋಡುತ್ತಾ ಇದ್ದುಬಿಟ್ಟೆ. ನೌಕರನು ನಡುನಡುವೇ ಬಂದು ಔಷಧಿ, ಗಂಜಿ ಕೊಟ್ಟು ಹೋಗುತ್ತಿದ್ದ.

ದಿನಗಳು ಒಂದೊಂದರಂತೆ ಉರುಳಿದವು. ನನಗೆ ಕ್ರಮೇಣ ರೋಗ ಗುಣ ಮುಖವಾಯಿತು. ಆದರೆ ಗೋಡೆಯ ಮೇಲಿನ ಚಿತ್ರ ಹಾಗೇ ಮಲಗಿತ್ತು. ಮತ್ತೊಂದು ಕೌತುಕವೇನೆಂದರೆ ಮೊದಲು ಗುಂಡಗೆ ಎತ್ತರವಾಗಿ ಕಾಣಿಸುತ್ತಿದ್ದ ಆತನ ಹೊಟ್ಟೆ ಕ್ರಮೇಣ ಕರಗುತಿತ್ತು. ಆ ಮೂಗೂ ಸಹ ಚಪ್ಪಟೆ

yಯಾಯಿತು. ಅದಷ್ಟೇ ಅಲ್ಲ. ಆ ಕಪ್ಪನೆಯ ಶರೀರ ಛಾಯೆ ಬದಲಾಯಿಸುತ್ತಾ ಬಂದು ಮೊದಲು ಗೋಡೆಯ ಮೇಲೆ ಸ್ಪಷ್ಟವಾಗಿ ಕಾಣುತ್ತಿದ್ದ ಚಿತ್ರ ಅಸ್ಪಷ್ಟವಾಗುತ್ತಾ ಬಂದು ಕಡೆಗೆ 'ಕೋಟಿಯ್ಯನ ಚಿತ್ರವೇ ಇದು?' ಎನ್ನುವಷ್ಟು ಬದಲಾಯಿಸಿತು.




ನನಗೆ ಎದ್ದು ಕುಳಿತುಕೊಳ್ಳುವ ಚೈತನ್ಯ ಬಂದ ತರುವಾಯ ಒಂದು ದಿನ ನೌಕರನೊಂದಿಗೆ "ಲೋ ಮಾಣಿ. ವಾರ್ತಾ ಪತ್ರಿಕೆ ಯಾವುದಾದರೂ ತಂದು ಕೊಡು" ಎಂದೆ. ಅವನು ನಮ್ಮ ದೇಶದ ಪತ್ರಿಕೆಯೊಂದನ್ನು ತಂದು ನನ್ನ ಮುಂದೆ ಹಾಕಿದ. ಪತ್ರಿಕೆ ತೆಗೆದು ನೋಡಿದರೆ ಅದರಲ್ಲಿ ಏನಿರಬೇಕು! 'ಗೋದಾವರಿ ಪ್ರಾಂತ್ಯದಲ್ಲಿರುವ ಮುಕ್ಕಾಮಲ ನಿವಾಸಿ, ಕೋಟ್ಯಾಧೀಶ್ವರನಾದ ಕೋಟಿಯ್ಯ ಶೆಟ್ಟಿ ದಾರುಣವಾದ ಅಜೀರ್ಣ ವ್ಯಾಧಿಯಿಂದ ನರಳುತ್ತಿರುವನು. ಗಣ್ಯವೈದ್ಯರೆಲ್ಲಾ ಬಂದು ಔಷಧಿ ಕೊಟ್ಟರು. ಪ್ರಯೋಜನವಾಗುವಹಾಗೆ ಕಾಣಿಸುತ್ತಿಲ್ಲ' ಎಂದಿತ್ತು.

ನಾನು ವ್ಯಾಕುಲನಾಗಿ ಪತ್ರಿಕೆ ಕೆಳಕ್ಕೆ ಬಿಸುಟು ಗೋಡೆಕಡೆ ದೃಷ್ಟಿ ಬೀರಿದೆ. ಕೃಶವಾಗಿದ್ದ ಕೋಟಿಯ್ಯನ ಚಿತ್ರ ಬಾಧೆಯಿಂದ ಅತ್ತಿತ್ತ ಉರುಳಾಡುವಂತೆ ತೋರಿತು. ಆ ದೃಶ್ಯನೋಡಿ ನನ್ನ ಎದೆ ನೀರಾಯಿತು. ನಾನು ಕೂಡಲೇ ಮತ್ತೊಂದು ಕೊಠಡಿಗೆ ಬದಲಾಯಿಸಿಕೊಂಡು ಅಲ್ಲಿರ ತೊಡಗಿದೆ.

ಮತ್ತೊಂದು ಮೂರು ದಿನಗಳಾದ ಮೇಲೆ ಬಂದ ಪತ್ರಿಕೆಯಲ್ಲಿ ಕೋಟಯ್ಯ ಶೆಟ್ಟಿ ಸ್ನೇಹ ಕೋಟಿಯೆಲ್ಲವನ್ನೂ ದುಃಖಸಾಗರದಲ್ಲಿ ಮುಳುಗಿಸಿ ಸ್ವರ್ಗಸ್ಥನಾದನೆಂದು ಇತ್ತು. ನಾನು ಕಣ್ಣೀರು ಒರೆಸಿಕೊಳ್ಳುತ್ತಾ ಆತನ ಬೊಂಬೆಯಿದ್ದ ಕೋಣೆಗೆ ಓಡಿದೆ. ಆದರೇನು ಆಯಿತು ಗೊತ್ತೇ? ಗೋಡೆಯ ಮೇಲೆ ಬೊಂಬೆಯಿಲ್ಲ! ಸುಣ್ಣ ಕಿತ್ತು ಹೋಗಿ ಕರ್ರಗೆ ಕಾಣಿಸುತ್ತಿದ್ದಷ್ಟು ಜಾಗ ಸುಣ್ಣ ಬಳಿದಂತಿತ್ತು. ನಾನು ಕೂಡಲೇ ನೌಕರನನ್ನು ಕೂಗಿ "ಅಯ್ಯಾ. ಈ ಕೋಣೆಯನ್ನು ರಿಪೇರಿ ಮಾಡಿ, ಸುಣ್ಣ ಹಚ್ಚಿದರೇನು?" ಎಂದು ಕೇಳಿದೆ.

"ಅಂತಹದೇನೂ ನಡೆಯಲಿಲ್ಲ. ಇಷ್ಟರಲ್ಲಿ ನಡೆಯುವ ಹಾಗೂ ಇಲ್ಲ" ಎಂದನವ."

ಪೇರಿರಾಜರು ಈ ರೀತಿಯಾಗಿ ಮುಗಿಸಿ ಸುಮ್ಮನಿದ್ದುಬಿಟ್ಟರು. ಕೇಳಿದವರೆಲ್ಲಾ ಈ ಕಥೆ ಕೇಳಿ ಮೆಚ್ಚಿಕೊಳ್ಳಲು ಪ್ರಾರಂಭಿಸಿದರು. "ಬಹಳ ಅದ್ಭುತವಾಗಿದೆ. ಇಲ್ಲಿರುವ ಕೋಟಿಯ್ಯ ಶೆಟ್ಟಿಯ ಆಕಾರ ಸಾವಿರಾರು ಮೈಲು ದೂರದಲ್ಲಿ ಗೋಡೆಯ ಮೇಲೆ ಕಾಣಿಸಿಕೊಳ್ಳುವುದೆಂದರೇನು? ತುಂಬಾ ಸೋಜಿಗದ ವಿಷಯವೇ ಸರಿ" ಎಂದು ನುಡಿದ ಒಬ್ಬಾತ. ಇನ್ನೊಬ್ಬನೆಂದ "ಅಷ್ಟೇ ಅಲ್ಲ. ಇಲ್ಲಿ ಅಜೀರ್ಣದಿಂದ ನರಳುತ್ತಿದ್ದ ಶೆಟ್ಟಿಯಲ್ಲಿ ಆದ ಬದಲಾವಣೆಗಳು ಆ ಗೋಡೆ ಮೇಲಿದ್ದ ಚಿತ್ರದಲ್ಲೂ ಆಗುವುದು, ಇಲ್ಲಿ ಈತನು 'ಹರಹರ' ಎಂದ ಕೂಡಲೇ ಅಲ್ಲಿದ್ದ ಚಿತ್ರ ಮಾಯವಾಗುವುದೂ ತುಂಬಾ ಆಶ್ಚರ್ಯಕರವಾಗಿದೆ." ಎಂದ.

ಇಷ್ಟರಲ್ಲಿ ಒಂದು ಮೂಲೆಯಲ್ಲಿ ಕುಳಿತಿದ್ದ ದೊಡ್ಡ ಮನುಷ್ಯರೊಬ್ಬರು "ಆದರೆ ಪೇರಿರಾಜರೇ, ನೀವು ಅಮೇರಿಕಾಗೆ ಯಾವಾಗ ಹೋದಿರಿ? ಅಮೇರಿಕಾ, ಇಂಗ್ಲೆಂಡ್ ದೇಶಗಳಿಗೆ ಹೋಗಿಬಂದವರೆಲ್ಲಾ ಕನಿಷ್ಟ ಪಿಳ್ಳು ಜುಟ್ಟು ತೆಗೆದುಹಾಕಿ, ಕ್ರಾಪು ಬಿಡುವುದೂ, ಪಂಚೆಗೆ ಬದಲು ಸೂಟು ಹಾಕುವುದೂ ಪದ್ಧತಿ. ನಾನು ನಿಮ್ಮನ್ನು ಚಿಕ್ಕಂದಿನಿಂದ ನೋಡುತ್ತಲೇ ಇದ್ದೇನೆ. ನೀವು ನಿಮ್ಮ ಜುಟ್ಟು, ಪಂಚೆ ಎಂದೂ ಬದಲಾಯಿಸಿದಂತೆಯಾಗಲೀ ಪರದೇಶಕ್ಕೆ ಹೋದಂತೆಯಾಗಲೀ ನೆನಪಿಲ್ಲವಲ್ಲ! ನಮ್ಮ ಮುಕ್ಕಾಮಲದಲ್ಲಿ ಕೋಟಿಯ್ಯ ಶೆಟ್ಟಿ ಎಂಬ ಕೋಟ್ಯಾಧೀಶ್ವರ ಯಾರಿದ್ದರು? ಕೋಟ್ಯಾಧೀಶ್ವರನ ಮಾತೇಕೆ ಒಬ್ಬ ಲಕ್ಷಾಧಿಕಾರಿಯೂ ಇಲ್ಲವಲ್ಲಾ" ಎಂದ ಕೇಳಿದರು.

ಪೇರಿರಾಜ ನಗುತ್ತಾ "ನಾನು ಹೇಳಿದ್ದರಲ್ಲಿ ಇರುವ ಅದ್ಭುತವೆಲ್ಲಾ ಇದೇ ಮತ್ತೆ. ನಾನು ವಿದೇಶಗಳಿಗೆ ಎಂದೂ ಹೋಗದಿದ್ದರೂ ನಮ್ಮ ಮುಕ್ಕಾಮಲದಲ್ಲಿ ಕೋಟ್ಯಾಧೀಶ್ವರನು ಇಲ್ಲದಿದ್ದರೂ, ನೀವು ಕೇಳಿದ ಕೂಡಲೇ ಕಥೆಯೊಂದನ್ನು ಕಲ್ಪಿಸಲಿಲ್ಲವೇ? ಇದಕ್ಕಿಂತಲೂ ಅದ್ಭುತವಾದುದೇನಿದೆ?" ಎಂದು ಕಿಸೆಯಿಂದ ಡಬ್ಬಿ ತೆಗೆದು ಒಂದು ಚಿಟಿಕೆ ನಸ್ಯವೇರಿಸಿದ ಮೂಗಿನ ಸೊಳ್ಳೆಗೆ.





ಪೂರ್ವಕಾಲದಲ್ಲಿ ನಾಗಲೋಕದಲ್ಲಿ ಒಂದು ಮಹಾನಾಗರವಿತ್ತು. ಆ ಹಾವು ಸರ್ಪ ರಾಜನಾದ ಆದಿಶೇಷನ ಅಭಿಮಾನ ಪಡೆದು ಸದಾ ಆತನನ್ನು ಆಶ್ರಯಿಸಿಕೊಂಡು, ಹಿಂದೆ ಹಿಂದೆ ಓಡಾಡುತಿತ್ತು.

ಒಂದು ದಿನ ಆದಿಶೇಷನು ಆ ಸರ್ಪ ದೊಂದಿಗೆ "ಏನಪ್ಪಾ, ನೀನು ಸರ್ವದಾ ನನ್ನನ್ನು ಅನುಸರಿಸುತ್ತಿರುವೆ. ನಿನ್ನ ಮನಸ್ಸಿನಲ್ಲಿ ಏನೋ ಒಂದು ಕೋರಿಕೆಯಿರುವಂತಿದೆ. ನಾನು ಆ ಕೋರಿಕೆ ತೀರಿಸಬಲ್ಲವನಾದರೆ, ಸಂಶಯ ಪಡದೆ ನನಗೆ ಹೇಳು" ಎಂದ.

ಆಗ ಆ ಮಹಾನಾಗನು ರಾಜನಿಗೆ ನಮಸ್ಕರಿಸಿ "ಪ್ರಭೂ, ನನಗೊಂದು ಕೋರಿಕೆಯಿರುವ ಮಾತು ನಿಜ. ತಾವು ಅನ್ಯಥಾ ಭಾವಿಸುವುದಿಲ್ಲವೆಂದು ಅಭಯ ಕೊಟ್ಟರೆ ಮನವಿ ಮಾಡಿಕೊಳ್ಳುವೆನು" ಎಂದಿತು.

"ಪರವಾಯಿಲ್ಲ. ಹೇಳಪ್ಪಾ" ಎಂದ ಆದಿಶೇಷ.

ರಾಜನು ಸಮ್ಮತಿಸಿದುದಕ್ಕೆ ನಾಗನು ಸಂತೋಷಗೊಂಡು "ಸ್ವಾಮಿ ಆಶ್ರಿತರಲ್ಲಿ ಪ್ರಮುಖನಾಗಿ, ಗಣ್ಯನೆಂದು ಪ್ರಸಿದ್ಧಿ ಪಡೆದಿದ್ದರೂ ನನಗೆ ಇತರ ಸರ್ಪಗಳಿಗಿರುವಂತೆಯೇ ಒಂದೇ ತಲೆಯಿರುವುದು ಮನಸ್ಸಿಗೆ ಒಡಂಬಡಲಿಲ್ಲ. ಪ್ರಭುಗಳಿಗಿರುವಂತೆ ಸಾವಿರ ಶಿರಗಳಿಲ್ಲದಿದ್ದರೆ ಹೋಗಲಿ, ಒಂದು ನೂರು ತಲೆಗಳು ನನಗಿರುವಂತೆ ಅನುಗ್ರಹಿಸುವ ಕೃಪೆಮಾಡಬೇಕು" ಎಂದಿತು.

ಅದಕ್ಕೆ ಆದಿಶೇಷನು ನಕ್ಕು "ಹುಚ್ಚನೇ, ನನಗೆ ಸಾವಿರ ತಲೆಗಳಿರುವುದು ವಿನೋದಕ್ಕೆ ಅಲ್ಲ. ಈ ಭೂಲೋಕವೆಲ್ಲವನ್ನೂ ಆ ತಲೆಗಳಮೇಲೆ ಹೊರಬೇಕಾದ ಕರ್ತವ್ಯವಿರುವುದರಿಂದ ಅವಶ್ಯಕವಾಗಿದೆ. ಇಲ್ಲದಿದ್ದ ಪಕ್ಷಕ್ಕೆ, ನಿಮ್ಮಂತೆಯೇ ಒಂದೇ ತಲೆಯಿಂದ ಸಂತೃಪ್ತನಾಗಿರುತ್ತಿದ್ದೆ. ನೂರು ತಲೆ ಬೇಕು, ಇನ್ನೂರು ತಲೆ ಬೇಕು ಎಂದು ಕೋರಿ, ಇಲ್ಲಸಲ್ಲದ ತಂಟೆ ತಂದುಕೊಂಡರೆ, ಆ ತಲೆಗಳೆಲ್ಲವನ್ನೂ ಸಂರಕ್ಷಣೆ ಮಾಡಿಕೊಳ್ಳಲಾರದೆ ತಾಪತ್ರಯ ಪಡಬೇಕಾದೀತು. ಆದುದರಿಂದ ಇರುವ ಒಂದು ತಲೆಯಿಂದ ತೃಪ್ತಿ ಪಟ್ಟುಕೊಂಡು

ಟಿ. ಸತ್ಯಾನಂದ



ನೀನು ಕೋರಿದ ಎರಡನೇ ತಲೆ ಬರುತ್ತದೆ. ಆದರಾತಲೆಗೆಕಣ್ಣುಗಳು ಮಾತ್ರವಿರುವುದಿಲ್ಲ. ಏಕೆಂದರೆ ನಿನ್ನ ಮೊದಲನೇ ತಲೆಯಂತೆಯೇ ಆ ತಲೆಗೂ ಕಣ್ಣಿದ್ದರೆ, ಅದೂ ನಿನ್ನ ಶರೀರ ವನ್ನು ಅತ್ತಿತ್ತ ಎಳೆದುಕೊಂಡು ಹೋಗುವೆ ನೆಂದು ಹೇಳುವುದು. ಈ ತಲೆ ಇತ್ತ, ಆ ತಲೆ ಅತ್ತ ಎಳೆಯಲು ಪ್ರಾರಂಭಿಸಿದರೆ ನಿನ್ನ ಅವಸ್ಥೆ ಬೇಡ ಬೇಡವೆನ್ನುವಂತಾಗುತ್ತದೆ. ಆದುದರಿಂದ ಕಣ್ಣಿರುವ ನಿನ್ನ ಮೊದಲನೇ ತಲೆಯೇ ನಿನ್ನ ಶರೀರವನ್ನು ನಡೆಸುವುದು; ಎರಡನೇ ತಲೆಯನ್ನು ಅಲಂಕಾರ ಮಾತ್ರಕ್ಕೆ ಇಟ್ಟುಕೋ" ಎಂದು ಹೇಳಿ ಕಳುಹಿಸಿದ.

ಈಗ ಆ ಮಹಾನಾಗನಿಗೆ ಬಾಲವು ಸಹ ಒಂದು ತಲೆಯಾಗಿ ಬದಲಾಯಿಸಿತು. ಅದನ್ನು ನೋಡಿಕೊಂಡು ಆತನಿಗೆಷ್ಟೋ ಆನಂದ, ತೃಪ್ತಿ, ಗರ್ವವುಂಟಾಯಿತು. ಮಿಕ್ಕ ಹಾವು ಗಳೆಲ್ಲಾ ಈ ಮಹಾನಾಗನನ್ನು ಕಂಡು ಅಸೂಯೆಗೊಂಡವು.

ಆದಿಶೇಷನು ಹೇಳಿದ ಪ್ರಕಾರ ಆ ಎರಡು ತಲೆಗಳ ನಾಗರವು ಮೊದಲು ಕೆಲವು ದಿನ ಕಣ್ಣಿರುವ ಮೊದಲಿನ ತಲೆಗೇ ಅಧಿಕಾರ ಕೊಟ್ಟು, ಅದು ಎತ್ತ ಎಳೆದುಕೊಂಡು ಹೋದರೆ ಅತ್ತ ಹೋಗುತಿತ್ತು.

ಆದರೆ ಒಂದು ದಿನ ಎರಡನೇ ತಲೆ ಹೇಳಿತು "ನೀನು ನನ್ನನ್ನು ಕೋರಿ ತಂದು ಕೊಂಡೆ. ಹಾಗಿರುವಾಗ, ಹಿಂದಿನದಕ್ಕಿಂ ತಲೂ ನನ್ನಮೇಲೆ ನಿನಗೆ ಹೆಚ್ಚು ಮಮಕಾರ,

ಸುಮ್ಮನಿರುವುದು ಲೇಸು" ಎಂದು ಸಲಹೆ ಕೊಟ್ಟನು.

ಆದರೆ ಆ ಸರ್ಪಕ್ಕೆ ರಾಜನ ಮಾತು ಸರಿ ತೋರಲಿಲ್ಲ. "ಈಮಾತ್ರಕ್ಕೆ ಏನೋ ಮಹಾ ಕೋರಿಕೆ ನೆರವೇರಿಸುವಂತೆ ಕೋರಿಕೋ ಎಂದು ಯಾಕಾದರೂ ಹೇಳಬೇಕಿತ್ತೋ ನಾಬೇರೆ ಕಾಣೆ" ಎಂದು ಅಂದುಕೊಂಡಿತು ಮನಸ್ಸಿನಲ್ಲಿ. ಸರ್ಪ ಸುಮ್ಮನಿರಲು ಮತ್ತೆ ಸರ್ಪರಾಜನು "ಏನು ಹೇಳುವೆ" ಎಂದು ಕೇಳಿದ.

ಅದಕ್ಕೆ ನಾಗರ "ಹೋಗಲಿ, ಮತ್ತೊಂದು ತಲೆಯಾದರೂ ಕೊಡಿಸಿಕೊಡಿ" ಎಂದಿತು ದೈನ್ಯದಿಂದ.

ಆಗ ಆದಿಶೇಷನು "ಸರಿ, ಹಾಗೆಯೇ ಮಾಡುವೆನು. ಈಗ ನಿನಗೆ ಬಾಲವಿರುವಕಡೆ

ಮಮತೆ, ಪ್ರೇಮ, ಆದರಣೆಗಳು ಇರಬೇಕಲ್ಲವೇ? ನೋಡಿದರೆ ಅಂಥ ಲಕ್ಷಣಗಳೇನೂ ಕಾಣಿಸುತ್ತಿಲ್ಲ. ಹೋಗಲಿ, ಆ ಮುದಿತಲೆಯ ಸರಿಸಮಾನವಾಗಿಯಾದರೂ ನನ್ನನ್ನು ನೋಡುತ್ತಿಲ್ಲ. ಈ ಪಕ್ಷಪಾತ ಬುದ್ಧಿ ನಿನಗೆ ಇರುವುದು ನ್ಯಾಯವೇ?" ಎಂದು ಗೊಣಗಿತು. ಆಗ ಮಹಾನಾಗನು "ಹಿರಿಯನಾದ ಮಹಾರಾಜ ಆದಿಶೇಷನ ಸಲಹೆಯ ಪ್ರಕಾರ ನಡೆದುಕೊಳ್ಳುತ್ತಿರುವೆನು. ಒಂದು ಮನೆಯಲ್ಲಿ ಅಧಿಕಾರ ಒಬ್ಬರಿಗೆ ಇರಬೇಕೇ ಹೊರತು ಇಬ್ಬರಿಗೆ ಇರುವುದು ಉಚಿತವಲ್ಲ" ಎಂದ.



ಎರಡನೇ ತಲೆ "ಅದೇನೋ ನಾನೂ ಒಪ್ಪಿಕೊಳ್ಳುತ್ತೇನೆ. ಆದರೂ ಸದಾ ಅದರ ಅಧಿಕಾರವೇ ಆದರೆ ನಾನು ಯಾವಾಗ ಅಧಿಕಾರ ಚಲಾಯಿಸುವುದು? ಕೆಲ ದಿನ ನಾನು ಸಾಗಿಸುವೆನು. ಆ ತಲೆಯನ್ನು ಸುಮ್ಮನಿರುವಂತೆ ಹೇಳಿ" ಎಂದು ಸಲಹೆ ಕೊಟ್ಟಿತು.

ಈ ಮಾತಿಗೆ ಮಹಾನಾಗರನಕ್ಕು "ನೀನು ಹೇಳಿದರಲ್ಲಿ ನ್ಯಾಯವಿಲ್ಲದೆ ಇಲ್ಲ. ಆದರೆ ಅದಕ್ಕೆ ಇರುವ ಅನುಭವ ನಿನಗೆಲ್ಲಿದೆ? ಎಲ್ಲಕ್ಕಿಂತಲೂ ಮುಖ್ಯವಾಗಿ ಅದಕ್ಕೆ ಕಣ್ಣುಗಳಿವೆ 'ಸರ್ವೇಂದ್ರಿಯಾಣಾಂ ನಯನಂಪ್ರಧಾನಂ' ಎಂದು ಸುಮ್ಮನೆ ನುಡಿದರೇ ಹಿರಿಯರು. ಕಣ್ಣು ಎಲ್ಲ ಅವಯವಗಳಲ್ಲಿ ಮುಖ್ಯವಾದುದು. ಕಣ್ಣೇ ಇಲ್ಲದಿರುವಾಗ ನೀನೇನು ಅಧಿಕಾರ ಮಾಡಬಲ್ಲೆ. ಒಂದುವೇಳೆ ಮಾಡಿದರೂ ಅದು 'ಕುರುಡು ದರ್ಬಾರು' ಎನ್ನಿಸಿಕೊಳ್ಳುವುದು. ಆದುದರಿಂದ ಇಲ್ಲಸಲ್ಲದ ತಂಟೆಗೆ ಹೋಗದೆ ಅಕ್ಕನ ಹಿಂದೆ ತಂಗಿಯಂತೆ ನಿಶ್ಚಿಂತೆಯಾಗಿರು" ಎಂದಿತು. 'ಹುಚ್ಚು ಹಿಡಿದವಗೆ ಬೆಲ್ಲ ಕಹಿ' ಎಂದಂತೆ ಈ ಸಲಹೆ ಎರಡನೇ ತಲೆಗೆ ಹಿಡಿಸಲಿಲ್ಲ. ಆಗ ಅದೇನು ಮಾಡಿತು ಗೊತ್ತೇ?

ಮೊದಲನೇ ತಲೆ ಮಾಮೂಲಿನಂತೆ ತನ್ನ ಕಣ್ಣುಗಳನ್ನು ಉಪಯೋಗಿಸಿ, ಆಹಾರವಿದ್ದ ಸ್ಥಳ ಹುಡುಕುತ್ತಾ ಜಾಗರೂಕತೆಯಿಂದ ಹಾವಿನ ಶರೀರವನ್ನು ತೆಗೆದುಕೊಂಡು ಹೋಗುತ್ತಿರಲು, ಎರಡನೇ ತಲೆ ದಾರಿಯಲ್ಲಿ ಸಿಕ್ಕಿದ ಒಂದು ಗಿಡದ ಬುಡವನ್ನು ಗಟ್ಟಿಯಾಗಿ ಕಚ್ಚಿ ಹಿಡಿದುಕೊಂಡಿತು. ಮೊದಲನೇ ತಲೆ ಎಷ್ಟು ಎಳೆದರೂ ಹಾವಿನ ಶರೀರ ಸರಿ

ದಾಡಿತೇ ಹೊರತು, ಎರಡನೇ ತಲೆ ತನ್ನ ಪಟ್ಟು ಬಿಡಲಿಲ್ಲ. ಇನ್ನು ಎಳೆದರೆ ಕಿತ್ತು ಹೋಗುವುದೆಂಬ ಭಯದಿಂದ ಮೊದಲನೇ ತಲೆ ಎಳೆಯುವುದನ್ನು ನಿಲ್ಲಿಸಿತು. ಆಗ ಎರಡನೇ ತಲೆ ತಾನು ಗೆದ್ದೆನೆಂಬ ಗರ್ವದಿಂದ ತನ್ನ ಕಡೆ ಎಳೆಯಲು ಪ್ರಾರಂಭಿಸಿತು. ಆಗ ಮೊದಲನೇ ತಲೆ ನಾಗರನೊಂದಿಗೆ ನೋಡಿದೆಯಾ ಎರಡನೇ ತಲೆ ಅತ್ತ ಎಳೆದುಕೊಂಡು ಹೋಗುತ್ತಿದೆ. ಈಗೇನು ಹೇಳುವೆ" ಎಂದು ಫಿರ್ಯಾದು ಮಾಡಿತು.

ಅದಕ್ಕೆ ನಾಗರ "ಬಿಡು ಎಳೆಯಲಿ. ಏನು ಮಾಡುವುದು ಮತ್ತೆ" ಎಂದು ವಿರಕ್ತಭಾವದಿಂದ ನುಡಿಯಿತು.

ಆಗ ಮೊದಲನೇ ತಲೆ "ನಾನೇನು ಮಾಡಲಿ, ನಿನ್ನ ಕರ್ಮ ಅನುಭವಿಸು" ಎಂದು ಹೇಳಿ ಸುಮ್ಮ ನಿದ್ದುಬಿಟ್ಟಿತು.

ಸರಿ, ನೆನೆಸಿದಂತೆಯೇ ಎರಡನೇ ತಲೆ ತನ್ನ ಕುರುಡು ದರ್ಬಾರು ಮೊದಲು ಮಾಡಿ ತನ್ನ ಚಪಲ ತೀರಿಸಿಕೊಳ್ಳಲು ಪ್ರಾರಂಭಿಸಿತು. ಒಂದು ದಿನ ನಾಗನನ್ನು ಮೊದಲನೇ ತಲೆಯನ್ನು ಸುತ್ತಿ ಬರಬರನೆಂದು ಎಳೆದುಕೊಂಡು ಹೋಯಿತು. ಎಲ್ಲಿಗೆ? ಎಲ್ಲಿಗೋ ಅದಕ್ಕೇ ತಿಳಿಯದು ಪಾಪ! ತಿಳಿಯಲು ಕಣ್ಣಿದ್ದರಷ್ಟೇ? ಕುರುಡುವಂಡೇದು. ಹಾಗೇ ಹೀಗೆ ಹೋಗಿ, ಧಗಧಗನೆಂದು ಉರಿಯುತ್ತಿದ್ದ ಒಂದು ದೊಡ್ಡ ಅಗ್ನಿ ಕುಂಡದಲ್ಲಿ ಬಿದ್ದಿತು. ಇನ್ನೇನಿದೆ? ಬಿದ್ದಿತೋ ಇಲ್ಲವೋ, ತಾನೂ, ನಾಗರ ಮತ್ತು ಮೊದಲನೇ ತಲೆ ನಿಮಿಷ ಮಾತ್ರದಲ್ಲಿ ಬೂದಿಯಾದವು.

ಈ ವಿಷಯ ತಿಳಿದ ಕೂಡಲೇ ಉಳಿದ ಹಾವುಗಳೆಲ್ಲವೂ ಸೇರಿ "ಈ ಮಹಾನಾಗರ ತಿಂದು ಸುಮ್ಮನಿರಲಾರದೆ ಆಪತ್ತನ್ನು ಕೋರಿ ತಂದುಕೊಂಡಿತು. ಭಗವಂತನು ಕೊಟ್ಟ ಒಂದು ತಲೆಯಿಂದ ತೃಪ್ತಿ ಪಡೆಯದೆ ಹುಚ್ಚು ವೇಷ ಹಾಕಲು ಹೋಗಿ ನಾಶವಾಯಿತು" ಎಂದು ಸಾನುಭೂತಿಯಿಂದ ನಿಟ್ಟುಸಿರು ಬಿಟ್ಟವು.

ಈ ವಿಧವಾಗಿ ತೃಪ್ತಿಯಿಲ್ಲದೆ, ಹಿರಿಯರ ಸಲಹೆ ಕೇಳದ ನಾಗರ ಸುಖವಾಗಿದ್ದ ತನ್ನ ಬಾಳನ್ನು ದುಃಖಕ್ಕೀಡು ಮಾಡಿಕೊಂಡಿದ್ದೇ ಅಲ್ಲದೆ, ಕೊನೆಯಲ್ಲಿ ಕುಟುಂಬ ಸಮೇತವಾಗಿ ಆತ್ಮನಾಶ ಮಾಡಿಕೊಂಡಿತು.






ಪೂರ್ವದಲ್ಲಿ ಒಬ್ಬ ದೇವಾಂಗರವನಿಗೆ ರೂಪವತಿ ಎಂಬ ಮಗಳಿದ್ದಳು. ಆಕೆಯ ಸೌಂದರ್ಯದಿಂದಲೇ ಆಕೆಗೆ ಆ ಹೆಸರು ಬಂದಿತು. ತನ್ನ ಅಂದಚೆಂದದ ಮುದ್ದುಕುವರಿಯನ್ನು ಏನಾದರೂ ಮಾಡಿ ಆ ದೇಶದ ಪಟ್ಟದರಸನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಆತನ ಬಯಕೆ.

ಆತನ ಹೆಂಡತಿ "ರಾಜನೆಲ್ಲಿ? ನಾವೆಲ್ಲಿ? ನಮ್ಮ ಮಗಳನ್ನು ಆತನು ವಿವಾಹವಾಗುವನೇ? ಹುಚ್ಚು ಆಲೋಚನೆ ಮಾಡದೆ ನಮ್ಮ ಕುಲದಲ್ಲೇ ಯಾರಾದರೊಬ್ಬ ಯೋಗ್ಯ ಹುಡುಗನಿಗೆ ಕೊಟ್ಟು ವಿವಾಹ ಮಾಡಿ" ಎಂದು ಹೇಳುವಳು. ಆದರೆ ಆತನು "ಛಿ, ನಿನಗೇನು ಗೊತ್ತು? ಸುಮ್ಮನಿರು" ಎಂದು ಆಕೆಯ ಮಾತನ್ನು ಹಾರಿಸಿ, ಸದಾ ಈ ವಿಷಯವನ್ನೇ ಆಲೋಚಿಸುತ್ತಿದ್ದ.

ಹೀಗಿರಲು ಒಂದು ದಿನ ಆ ಪಟ್ಟಣವನ್ನು ಆಳುತ್ತಿದ್ದ ಅರಸನೇ ಆತನಿಗೆ ಎದುರಾಗಿ "ಏನಯ್ಯಾ, ವಿಶೇಷ" ಎಂದ.

"ಏನಿದೆ, ಪ್ರಭೂ! ನಾವೆಲ್ಲ ಹತ್ತಿಯಿಂದ ನೂಲು ತೆಗೆದು, ಆ ನೂಲಿನಿಂದ ವಸ್ತ್ರಗಳನ್ನು ನೇಯುವೆವು. ನಮ್ಮ ಮಗಳು ರೂಪವತಿ ಮಾತ್ರ ಹುಲ್ಲಿನಿಂದ ಬಂಗಾರದ ದಾರ ತೆಗೆಯುತ್ತಾಳೆ!" ಎಂದ ಆ ದೇವಾಂಗರವನು.

ರಾಜನು ಆಶ್ಚರ್ಯಗೊಂಡು "ಹಾಗಾದರೆ ನಿನ್ನ ಮಗಳನ್ನು ನಮ್ಮ ಅಂತಃಪುರಕ್ಕೆ ಕಳುಹಿಸಿಕೊಡು. ಆ ವಿಚಿತ್ರ ನೋಡೋಣ" ಎಂದ.

ದೇವಾಂಗದವನು ಮನೆಗೆ ಹಿಂತಿರುಗಿ ಬಂದು ಹೆಂಡತಿಯೊಂದಿಗೆ ನಡೆದ ವಿಷಯವೆಲ್ಲವನ್ನೂ ಹೇಳಲು "ಅಯ್ಯೋ, ಇದೇನು ಗ್ರಹಚಾರ ಬಂತಪ್ಪಾ, ಇಂಥ ಸುಳ್ಳುಪಳ್ಳು ಏಕೆ ನುಡಿದಿರಿ? ಸುಮ್ಮನಿರಲಾರದೆ ಇಲ್ಲದ ಸಲ್ಲದ ಪೀಡೆ ತಂದಿರಲ್ಲಾ" ಎಂದು ಮೂಗಿನ ಮೇಲೆ ಬೆರಳು ಇಟ್ಟುಕೊಂಡಳು.

"ಎಲೆ ತಿಳಿಗೇಡಿ ಹೆಂಗಸೇ, ನಮ್ಮ ಮಗಳನ್ನು ಯಾವುದಾದರೊಂದು ರೀತಿ ಆತನ ಹತ್ತಿರ ಕಳುಹಿಸುವ ಸಲುವಾಗಿ ಈ ಉಪಾಯ ಹೂಡಿದೆ. ನಮ್ಮ ರೂಪವತಿ ರಾಜನ ಅಂತಃಪುರಕ್ಕೆ ಹೋಗಿ ಆತನ ಕಣ್ಣಿಗೆ

ಪಿ. ವಿ. ರಾಮಚಂದ್ರಮೂರ್ತಿ, ಮದರಾಸು.



ಬಿದ್ದಳೆಂದರೆ, ಅವಳ ಅಂದಕ್ಕೆ ಚಕಿತನಾಗಿ, ಹುಲ್ಲಿನ ಮಾತು, ಬಂಗಾರದ ಮಾತು ಮರೆತೇ ಬಿಡುತ್ತಾನೆ. ಮದುವೆಗೆ ಮುಹೂರ್ತ ನಿಶ್ಚಯಿಸುವಂತೆ ಪುರೋಹಿತನಿಗೆ ಕೂಡಲೇ ಹೇಳಿ ಕಳುಹಿಸುವನು" ಎಂದು ಹೇಳಿ ಮಗಳನ್ನು ಸೊಗಸಾಗಿ ಶೃಂಗಾರ ಮಾಡಿಸಿ, ಕುದುರೇ ಸಾರೋಟಿನಲ್ಲಿ ಕೂರಿಸಿ, ರಾಜನ ಅರಮನೆಗೆ ಕಳುಹಿಸಿದ.

ರಾಜನು ರೂಪವತಿಯನ್ನು ಕಂಡ ಕೂಡಲೇ ಒಂದು ರಾಟೆ, ಕದರು, ಒಂದು ಬುಟ್ಟಿ ತುಂಬಾ ಹುಲ್ಲು ಆಕೆಯ ಮುಂದಿಟ್ಟು, "ನಾನು ಮತ್ತೆ ಸಾಯಂಕಾಲ ಇಲ್ಲಿಗೆ ಬರುವೆನು. ಆ ವೇಳೆಗೆ ಈ ಹುಲ್ಲನ್ನು ಬಂಗಾರದ ನೂಲಾಗಿ ಮಾಡಿರಬೇಕು. ಗೊತ್ತೇ?" ಎಂದು ಹೇಳಿ ಹೊರಟು ಹೋದ.

ರೂಪವತಿಗೆ ಏನು ಮಾಡಲೂ ತೋರದಾಯಿತು. 'ಸುಮ್ಮನಿರಲಾರದೆ ನಮ್ಮಪ್ಪ ಇಂಥ ಉಪದ್ರವ ತಂದಿಟ್ಟನಲ್ಲಾ. ಈಗೇನು ಮಾಡಲಿ? ಈ ಸಮಯದಲ್ಲಿ ನನಗೆ ಯಾರು ಸಹಾಯ ಮಾಡುವರು?' ಎಂದು ನೆನೆನೆನೆದು ದುಃಖ ಪಟ್ಟಳು.

ಅಷ್ಟರಲ್ಲಿ ಮೂರು ಅಡಿ ಉದ್ದದ ಒಬ್ಬ ಗಿಡ್ಡ ಮನುಷ್ಯ ಕಿಟಕಿಯಿಂದ ಒಳಕ್ಕೆ ಹಾರಿ ಬಂದು "ನೀನೇನೂ ಹೆದರಬೇಡಾಮ್ಮ. ನಾನು ನಿನಗೆ ಸಹಾಯ ಮಾಡುವೆನು" ಎಂದ. ಆತನಿಗೆ ಅರ್ಧ ಅಡಿ ಮೂಗು, ಒಂದು ಅಡಿ ಉದ್ದದ ಗಡ್ಡವಿತ್ತು.

ಅವನ ಆಕಾರ ನೋಡಿ ರೂಪವತಿಗೆ ಮೊದಲು ಭಯವಾಯಿತಾದರೂ, ರಾಟೆಯ ಮುಂದೆ ಕುಳಿತು, ಕದರಿಗೆ ಹುಲ್ಲನ್ನು ತಗಲಿಸಿ ಅವನು ಬರ್ ಬರ್ ಅಂತ ರಾಟೆಯನ್ನು ತಿರುಗಿಸಿ ಬಂಗಾರದ ಎಳೆ ಎಳೆಯುತ್ತಿದ್ದರೆ, ಆಕೆಗೆ ಎಲ್ಲಿಲ್ಲದ ಧೈರ್ಯವುಂಟಾಗಿ, ಅಪರಿಮಿತ ಆನಂದ ಹೊಂದಿದಳು.

ಇದನ್ನು ಕಂಡು ಅವನು "ಹಾಗಾದರೆ ತಂಗೀ, ಈ ಹುಲ್ಲೆಲ್ಲವನ್ನೂ ಬಂಗಾರದ ದಾರವಾಗಿ ಮಾಡುವೆನು. ನನಗೇನು ಬಹುಮಾನ ಕೊಡುವೇ?" ಎಂದು ಕೇಳಿದ.

"ಅದಕ್ಕೇನು ನನ್ನ ಕೊರಳಲ್ಲಿರುವ ಚಿನ್ನದ ಸರ ತೆಗೆದುಕೊಡುತ್ತೇನೆ" ಎಂದು ರೂಪವತಿ ತಡಬಡಿಸದೆ ನುಡಿದಳು.

"ಸರಿ" ಎಂದು ಅವನು ಹುಲ್ಲೆಲ್ಲವನ್ನೂ

ಬಂಗಾರದ ನೂಲನ್ನಾಗಿ ಮಾಡಿ, ಆ ಹುಡುಗಿ ಕೊಟ್ಟ ಸರವನ್ನು ತೆಗೆದುಕೊಂಡು, 'ಬೇಕಾದಾಗ ನನ್ನನ್ನು ನೆನೆಸಿಕೊ' ಎಂದು ಕಿಟಕಿಯಿಂದಲೇ ಹೊರಕ್ಕೆ ಹಾರಿ ಮಾಯವಾದ.

ಸಾಯಂಕಾಲ ರಾಜನು ಬಂದು ನೋಡಲು ಜೇಡನ ದಾರಕ್ಕಿಂತಲೂ ಹೆಚ್ಚು ನಾಜೂಕಾಗಿ ತೆಗೆದ ಬಂಗಾರದ ನೂಲು ನೋಡಿ, ಆತನ ಕಣ್ಣುಗಳು ಕೋರೈಸಿದವು.

ಹೊಲದಲ್ಲಿ ಬೇಕಾದಷ್ಟು ಗಾಡಿ ಹುಲ್ಲು ಬಿದ್ದಿದ್ದರೆ ಒಂದೇ ಒಂದು ಬುಟ್ಟಿ ಹುಲ್ಲು ಮಾತ್ರ ಕೊಟ್ಟಿನಲ್ಲಾ ಎಂದುಕೊಂಡು ಈ ಸಾರಿ ಒಂದು ಗಾಡಿ ಹುಲ್ಲು ತರಿಸಿ ಹಾಕಿ "ಬೆಳಗಾಗುವಷ್ಟರಲ್ಲಿ ಇದೆಲ್ಲ ಬಂಗಾರದ ದಾರವಾಗಿರಬೇಕು. ಇಲ್ಲಾ ಅಂತಂದರೆ ನೋಡಿಕೋ!" ಎಂದು ಎಚ್ಚರಿಕೆಕೊಟ್ಟು ಹೊರಟು ಹೋದ.

ಆಕೆ ನೆನೆಸಿಕೊಂಡಿದ್ದೇ ತಡ, ಕುಳ್ಳನು ಅಲ್ಲಿಗೆ ಬಂದು "ಸರಿ, ಈ ಗಾಡಿ ಹುಲ್ಲನ್ನೂ ಬಂಗಾರದ ದಾರ ಮಾಡುವೆನು. ಮತ್ತೆ ನನಗೇನು ಕೊಡುವೆ?" ಎಂದು ಕೇಳಿದ. "ಅಪ್ಪಾ ಈ ಉಂಗರದ ಹೊರತು ನನ್ನಲ್ಲಿ ಮತ್ತೇನೂ ಇಲ್ಲ. ಬೇಕಾದರೆ ಇದನ್ನು ತೆಗೆದುಕೋ" ಎಂದಳು ರೂಪವತಿ.

ಆ ಹುಡುಗಿ ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ ಬರ್ ಬರ್ ಅಂತ ರಾಟೆ ತಿರುಗಿಸಿ ಗಾಡಿ ಹುಲ್ಲನ್ನು ದಾರವಾಗಿ ಬದಲಾಯಿಸಿದ.



ಆಕೆ ಬೆರಳಲ್ಲಿದ್ದ ಉಂಗರವನ್ನು ತೆಗೆದುಕೊಂಡು ಗಿಡ್ಡ ಮಾಯವಾದ.

ಬೆಳಗ್ಗೆ ಬಂದು ನೋಡಲು ರಾಜನ ಆಶ್ಚರ್ಯಕ್ಕೆ ಮೇರೆಯೇ ಇಲ್ಲ. ಶಹಬಾಷ್! ಈ ರೀತಿ ತನ್ನ ಹುಲ್ಲೆಲ್ಲ ಬಂಗಾರವಾಗುವುದನ್ನು ಕಂಡು, ಆನಂದದಿಂದ ಉಬ್ಬಿಹೋಗಿ ಈ ಸಾರಿ ಮೂರು ಗಾಡಿ ಹುಲ್ಲು ಆಕೆಯ ಮುಂದೆ ತಂದಿರಿಸಿದ. ಇದೆಲ್ಲ ನೋಡಿ ರೂಪವತಿಯು ಮನಸ್ಸು ತುಂಬಾ ರೋಸಿಹೋಗಿ, ಧೈರ್ಯದಿಂದ ಹೀಗೆ ಕೇಳಿದಳು "ಇನ್ನೆಷ್ಟು ದಿನ ಈ ರೀತಿ ದಾರ ತೆಗೆಯುತ್ತಿರಬೇಕು?"

ಈ ರೀತಿ ಆಕೆ ಪ್ರಶ್ನೆ ಮಾಡಿದುದಕ್ಕೆ ರಾಜನಿಗೆ ಕೋಪ ಬರಲಿಲ್ಲ. ಈಗಾಗಲೇ ಆತನಿಗೆ ರೂಪವತಿ ಎಂದರೆ ತುಂಬಾ ಗೌರವ



ಯಾಗುವನು. ಒಂದು ವರ್ಷಕ್ಕೆಲ್ಲಾ ನಿನಗೆ ಮಗನು ಹುಟ್ಟುವನು. ಆ ಮಗುವನ್ನು ನನಗೆ ಕೊಡುತ್ತೇನೆಂದು ಒಪ್ಪಿದರೆ ನಿನಗೆ ನೂಲು ತೆಗೆದು ಕೊಡುತ್ತೇನೆ" ಎಂದ.

'ರಾಜನು ನನ್ನನ್ನು ಮದುವೆಯಾಗಿ, ನನಗೆ ಮಗನು ಹುಟ್ಟಿದರಲ್ಲವೇ ಇವನಿಗೆ ಕೊಡಬೇಕಾಗುವುದು ? ಸದ್ಯ ಈ ಗಂಡಾಂತರದಿಂದ ಪಾರಾದರೆ ಆಮೇಲಿನ ವಿಷಯ ನೋಡಿಕೊಳ್ಳಬಹುದು" ಎಂದುಕೊಂಡು ರೂಪವತಿ ಒಪ್ಪಿಕೊಂಡಳು. ಆಕೆ ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿ ಹುಲ್ಲೆಲ್ಲಾ ಬಂಗಾರದ ನೂಲಾಗಿತ್ತು. ಗಿಡ್ಡ ಮಾಯವಾಗಿದ್ದ.

ರಾಜ ಬಂದ. ನೂಲು ನೋಡಿದ ಪರಮಾನಂದ ಹೊಂದಿ, ಒಳ್ಳೆ ಮುಹೂರ್ತದಲ್ಲಿ ರೂಪವತಿಯನ್ನು ಮದುವೆಯಾದ.

ರೂಪವತಿ ರಾಣಿಯಾದ ಒಂದು ವರ್ಷಕ್ಕೆಲ್ಲಾ, ಹುಣ್ಣಿಮೆಯ ಚಂದ್ರನನ್ನು ಹೋಲುವ ಮಗನು ಜನಿಸಿದ. ಇಪ್ಪತ್ತೊಂದನೆಯ ದಿನ ಮಗುವನ್ನು ತೊಟ್ಟಿಲಲ್ಲಿ ಇಡಲು ಸಿದ್ಧವಾಗುತ್ತಿರಲು, ಕುಳ್ಳನು ಪ್ರತ್ಯಕ್ಷವಾಗಿ "ರಾಣೀ, ನಿನ್ನ ಮಗನನ್ನು ತೆಗೆದುಕೊಂಡು ಹೋಗಲು ಬಂದಿದ್ದೇನೆ" ಎಂದ.

ಆಕೆಯ ಎದೆ ದಸಕ್ ಎಂದಿತು. ತಾನು ಹಿಂದೆ ಅತನಿಗಿತ್ತ ವಾಗ್ದಾನದ ಮಾತೇ ಜ್ಞಾಪಕವಿರಲಿಲ್ಲ. "ಅಯ್ಯೋ, ನನ್ನ ಮುದ್ದು ಮಗನನ್ನು ಕೊಡು ಎಂದರೆ ಹೇಗೆ? ಅದರ ಬದಲಾಗಿ ಮತ್ತೇನನ್ನಾದರೂ ಕೇಳು" ಎಂದಳು ದೈನ್ಯತೆಯಿಂದ.

ಪ್ರೇಮಗಳುಂಟಾಗಿದ್ದವು. ಅದರಿಂದ "ಈ ಮೂರು ಗಾಡಿ ತೆಗೆದುಬಿಡು, ಸಾಕು" ಎಂದು ಹೇಳಿ ಹೊರಟುಬಿಟ್ಟ.

ರಾಜನು ಅತ್ತ ಹೋದನೋ ಇಲ್ಲವೋ ಆ ಕುಳ್ಳ ಬಂದು "ಇಷ್ಟೇ ಅಲ್ಲ, ನಿಮ್ಮ ರಾಜನ ರಾಜ್ಯದಲ್ಲಿರುವ ಹುಲ್ಲೆಲ್ಲವನ್ನೂ ಬಂಗಾರದ ದಾರವನ್ನಾಗಿ ಮಾಡಿ, ದನಕರುಗಳಿಗೆ ಹುಲ್ಲಿಲ್ಲದಂತೆ ಮಾಡಬಲ್ಲೆನು. ಮತ್ತೆ ನನಗೇನು ಕೊಡುವೆ?" ಎಂದು ಕೇಳಿದ.

ಏನೂ ಹೇಳಲಾರದೆ ರೂಪವತಿ ಕಣ್ಣೀರು ಸುರಿಸುತ್ತಾ "ನನ್ನ ಹತ್ತಿರ ಇನ್ನೇನೂ ಉಳಿದಿಲ್ಲವಲ್ಲಾ" ಎಂದಳು.

ಆಗ ಕುಳ್ಳ "ಈ ಹುಲ್ಲೆಲ್ಲವನ್ನು ಬಂಗಾರವನ್ನಾಗಿ ಬದಲಾಯಿಸುವೆನು. ರಾಜ ಬಂದು ನೋಡಿ ಮೆಚ್ಚಿಕೊಂಡು, ನಿನ್ನನ್ನು ಮದುವೆ

“ಇಲ್ಲ, ಅದಾಗದು. ಆ ಮಗುವೇ ಬೇಕು” ಎಂದು ಕುಳ್ಳ ಹಠಹಿಡಿದ.

ಇನ್ನೇನು ಮಾಡಲೂ ಸಾಧ್ಯವಿಲ್ಲದೆ ರಾಣಿ “ಹೋಗಲಿ, ಹುಡುಗ ಒಂದು ವರ್ಷ ನನ್ನ ಹತ್ತಿರ ಬೆಳೆಯಲಿ. ತರುವಾಯ ತೆಗೆದು ಕೊಂಡು ಹೋಗುವೆಯಂತೆ” ಎಂದು ಹೇಳಿದಳು. “ಸರಿ” ಅಂತ ಅವನು ಮಾಯವಾಗಿ ಬಿಟ್ಟ. ವರ್ಷ ಪೂರ್ತಿಯಾದ ಕೂಡಲೇ ಮತ್ತೆ ಅವನು ಪ್ರತ್ಯಕ್ಷವಾಗಿ “ಕೊಡು ಮಗುವನ್ನಿತ್ತ” ಎಂದು ನಿರ್ದಯನಾಗಿ ಕೇಳಿದ.



“ಅಯ್ಯಾ ಮಗು ಈಗತಾನೇ ಅಂಬೆಗಾಲಿಡುವುದನ್ನು ಕಲಿತುಕೊಂಡಿದ್ದಾನೆ. ಅವನು ತಪ್ಪು ಹೆಜ್ಜೆಗಳನ್ನಿಡುವುದನ್ನು ನೋಡಬೇಕೆಂಬ ಹಂಬಲವಿದೆ ನನಗೆ. ಇನ್ನೊಂದು ವರ್ಷವಾಗಲಿ” ಎಂದಳು ರಾಣಿ. “ಹಾಗೆಯೇ ಆಗಲಿ” ಎಂದು ಆಗ ಹೊರಟು ಹೋಗಿ ಕುಳ್ಳ ಸರಿಯಾಗಿ ಒಂದು ವರ್ಷ ಕಳೆದ ಮೇಲೆ ಪುನಃ ಪ್ರತ್ಯಕ್ಷನಾದ.

“ಮಗುವಿನ ಮುದ್ದು ಮಾತುಗಳನ್ನು ಕೇಳದೆ ಹೇಗೆ ಕೊಡಲಿ, ನೀನೇ ಹೇಳು. ಮತ್ತೊಂದು ವರ್ಷ ಬಿಡು” ಎಂದು ರಾಣಿ. ಮತ್ತೊಂದು ಸಾರಿ ಕೇಳಿದಳು. ಈ ಸಾರಿ ಕುಳ್ಳನಿಗೂ ಕೋಪ ಬಂತು. “ಏನಮ್ಮಾ, ನಿನಗೆ ಹುಡುಗಾಟವಾಗಿರುವಂತೆ ಕಾಣುತ್ತದೆ. ನಾನು ಯಾರೆಂದುಕೊಂಡೆ? ಭೂತಗಳಲ್ಲೆಲ್ಲಾ ಗಣ್ಯನಾದ ಭೂತ ನಾನು. ನನ್ನ ಗ್ರಹಚಾರ ಕಡಿಮೆಯಾಗಿ ನಮ್ಮವರಿಗೂ ನನಗೂ ಮನಸ್ತಾಪವುಂಟಾಗಿ ಇತ್ತ ಬಂದೆ. ಇಲ್ಲದಿದ್ದರೆ ಭೂತಗಳಿಗೆಲ್ಲಾ ರಾಜನಾಗಿರಬೇಕಾಗಿತ್ತು. ನನಗೆ ಕೋಪವನ್ನುಂಟುಮಾಡಿದೆಯೋ ನಿನ್ನನ್ನೂ, ನಿನ್ನ ಮಗನನ್ನೂ, ಎಲ್ಲರನ್ನೂ ನುಂಗಿ ಹಾಕಿಬಿಡುತ್ತೇನೆ! ತಿಳಿಯಿತೇ?” ಎಂದ.

ಆಗ ರಾಣಿ “ಭೂತರಾಜನೇ! ನಿನಗೂ ನಿಮ್ಮ ಜನಕ್ಕೂ ಏಕೆ ಜಗಳವಾಯಿತು?” ಎಂದು ಮಾತು ಮರೆಯಿಸಲು ಕೇಳಿದಳು.

ಅವನಿಗೆ ಕೋಪ ತುಸ ಕಡಿಮೆಯಾಗಿ “ಅದೆಲ್ಲಾ ನಿನಗೇಕಮ್ಮಾ! ಕೆಲವು ಹಾಳು ಗುಬ್ಬಚ್ಚಿಗಳು ಮಾಡಿದವು ಈ ತಂಟೆಯೆಲ್ಲಾ. ನನ್ನ ಕರ್ಮ ಹಾಗಿತ್ತು. ಒಂದು ದಿನ ನಾನು ನಿದ್ದೆ ಮಾಡುತ್ತಿದ್ದರೆ ಆ ಹಾಳು ಗುಬ್ಬಚ್ಚಿಗಳಿಗೆ

ಎಲ್ಲೂ ಸ್ಥಳ ಕಾಣಿಸದ ಹಾಗೆ ನನ್ನ ಗಡ್ಡದಲ್ಲಿ ಗೂಡು ಕಟ್ಟಿಕೊಳ್ಳಬೇಕೆ?.... ನಿನಗೇಕೆ ಬಿಡು ಆ ಗೊಡವೆ. ಮತ್ತೆ ಬರುತ್ತೇನೆ. ಆಗ ನಿನ್ನ ಮಗನನ್ನು ಕೊಟ್ಟುಬಿಡಲೇ ಬೇಕು, ಕಂಡೆಯಾ!" ಎಂದು ಖಡಾಖಂಡಿತವಾಗಿ ಹೇಳಿ ಹೊರಟು ಹೋದ.

ಒಂದು ವರ್ಷ ಹಾ ಹಾ ಅನ್ನುವಷ್ಟರಲ್ಲಿ ಕಳೆದು ಹೋಯಿತು. ರಾಣಿಯ ಮಗನಿಗೆ ಮಾತು ಬಂತು, ಭೂತ ಪ್ರತ್ಯಕ್ಷವಾಗಿ ಗಡ್ಡ ನೇವರಿಸಿಕೊಳ್ಳುತ್ತಾ "ಮಗನನ್ನು ಕೊಡು" ಎಂದ.

ಏನು ಮಾಡಲೂ ಆಕೆಗೆ ಬುದ್ಧಿ ತೋರದೆ, ಕಣ್ಣೀರು ಸುರಿಸುತ್ತಾ ತನ್ನ ಮಗನ ಕಡೆ ನೋಡಲು ಮೊದಲು ಮಾಡಿದಳು. ಮಗು ಮಾತ್ರ ಮನೆಯ ಚಾವಣಿಯ ಕಡೆ ಬೆರಳು ಮಾಡಿ ತೋರಿಸುತ್ತಾ "ಅಮ್ಮಾ ಗುಬ್ಬಚ್ಚಿ, ಗುಬ್ಬಚ್ಚಿ ಗೂಡು" ಎಂದಿತು.

"ಏನಪ್ಪಾ" ಅಂತ ರಾಣಿ ತಲೆಯೆತ್ತಿ ನೋಡಿದರೆ, ಚಾವಣಿಯ ಮೇಲೆ ಗುಬ್ಬಚ್ಚಿ ಗೂಡು ಕಾಣಿಸಿತು. ಆಕೆಯೂ ಸಹ "ಹೌದು ಮಗು, ಗುಬ್ಬಚ್ಚಿ ಗೂಡು" ಎಂದಳು. ದಾಸಿಯರೆಲ್ಲಾ "ಹೌದು ರಾಣಿಸಾಹೇಬರೇ, ಗುಬ್ಬಚ್ಚಿ ಗೂಡು, ಗುಬ್ಬಚ್ಚಿ ಗೂಡು" ಎಂದರು.

ಅದನ್ನು ಕೇಳಿ ಕುಳ್ಳ ಕಣ್ಣು ಕೆಂಪಗೆಮಾಡಿ "ಏನು! ನನ್ನನ್ನು ಗುಬ್ಬಚ್ಚಿ ಗೂಡು ಅಂತ ಹೇಳಿ ಹಾಸ್ಯ ಮಾಡುವಿರಾ? ನಿಮಗೆ ಹೋಗೋಕಾಲ ಬಂದಿದೆ. ....ನಮ್ಮ ಭೂತಗಳು ನನ್ನನ್ನು ಈ ರೀತಿಯೇ ಗೋಳಾಡಿಸುತ್ತಿರುವವೆಂದು ಇಲ್ಲಿಗೆ ಬಂದರೆ...." ಎಂದು ಕಿರಿಚಾಡಿದ.

'ಗುಬ್ಬಚ್ಚಿ ಗೂಡು' ಎಂದರೆ ಆ ಕುಳ್ಳ ಉರಿದು ಬೀಳುವನೆಂದು ತಿಳಿಯಿತು. ರಾಣಿ ಕೂಡಲೇ "ಗುಬ್ಬಚ್ಚಿ ಗೂಡು" ಎಂದು ಕೈ ಚಪ್ಪಾಳೆ ತಟ್ಟುತ್ತಾ ಅಂದಳು. ಈ ಮಾತು ಹೊಂದಿಸಿಕೊಂಡು ದಾಸಿಜನರೆಲ್ಲ ಪರಿಹಾಸ್ಯ ಮಾಡಲು ಪ್ರಾರಂಭಿಸಿದರು.

ಅವನು ರೊಚ್ಚಿಗೆದ್ದು ನನ್ನನ್ನು ನೀವು ಅವಮಾನ ಮಾಡಿದುದರಿಂದ ನಿಮ್ಮ ಮನೆ ಹೊಸಲಲ್ಲಿ ಕಾಲಿಡುವುದೇ ಇಲ್ಲ" ಎಂದು ಅಲ್ಲಿಂದ ಕಾಲುಕಿತ್ತ. ಪೀಡೆ ಕಳೆಯಿತೆಂದು ರಾಣಿ ಸಂತೋಷ ಪಟ್ಟಳು.





# ಉತ್ತಮ ಪುತ್ರ

ಚೀನಾದೇಶದಲ್ಲಿ ಒಂದು ಪಟ್ಟಣವಿತ್ತು. ಆ ಪಟ್ಟಣದಲ್ಲಿ ಹ್ಯೂಯರ್ಕ ಎಂಬ ಧನಿಕನಿದ್ದ. ಅವನು ತುಂಬಾ ಕೆಟ್ಟವನು. ಯಾರ ಮೇಲಾದರೂ ಅವನಿಗೆ ಕೋಪ ಬಂತೆಂದರೆ ಅವರಿಗೆ ಗ್ರಹಚಾರ ವಕ್ರಿಸಿದಂತೆಯೇ! ಹಣವಿದ್ದ ಆ ಸಾಮಿಯಾದರಿಂದ ತುಂಟರಿಗೆ ಪ್ರೋತ್ಸಾಹಕೊಟ್ಟು, ತನ್ನ ಕೋಪಕ್ಕೆ ಕಾರಣರಾದವರನ್ನು ಹತ್ಯೆ ಮಾಡಿಸುವುದೋ, ಇಲ್ಲ ಮತ್ತೆ ಯಾವುದೋ ಒಂದು ವಿಧವಾಗಿ ಕಿರುಕುಳಕೊಡುವುದೋ, ಆತನ ವಾಡಿಕೆಯಾಗಿತ್ತು.

ಆ ಊರಿನಲ್ಲೇ ವಾಂಗ್ ಅಂತ ಬಡವನೊಬ್ಬನಿದ್ದ. ಬಡವನಾಗಿದ್ದರೂ ವಾಂಗ್ ಧೈರ್ಯವಂತ. ಹ್ಯೂಯರ್ಕ ಮಾಡುತ್ತಿದ್ದ ಅನ್ಯಾಯಗಳನ್ನು ಆತನು ಸಹಿಸಲಾರದೆ ಒಂದು ದಿನ ಆ ಪಟ್ಟಣವನ್ನು ಆಳುತ್ತಿದ್ದ ರಾಜನ ಹತ್ತಿರ ಹೋಗಿ, ಹ್ಯೂಯರ್ಕ ಮಾಡುತ್ತಿದ್ದ ದೌರ್ಜನ್ಯಗಳನ್ನು ವಿವರಿಸಿ, ಆತನಿಗೆ ಬುದ್ಧಿ ಹೇಳುವಂತೆ ಕೇಳಿಕೊಂಡ.

ರಾಜನು ವಾಂಗ್ ಮಾತನ್ನು ಲಕ್ಷ್ಯಕ್ಕೆ ತರಲಿಲ್ಲ. 'ಆ ಧನಿಕನೆಂದರೆ ಆಗದೆ ಈ ರೀತಿ ಹೇಳುತ್ತಿದ್ದಾನೆ' ಎಂದು ಕೋಪಿಸಿಕೊಂಡನೇ ಹೊರತು, ನಿಜಾನಿಜಗಳನ್ನು ತಿಳಿಯಲು ರಾಜನು ಪ್ರಯತ್ನ ಪಡಲಿಲ್ಲ. ಅಷ್ಟೇ ಅಲ್ಲದೆ "ಇಂತಹ ಚಾಡಿ ಮಾತುಗನ್ನು ಹೇಳಬೇಡ. ಹೊರಡು ಇಲ್ಲಿಂದ" ಎಂದು ವಾಂಗ್‌ನನ್ನು ಗದರಿಸಿದ.

'ಬಡವನ ಮಾತು ಬಾಯಿಗೆ ಕೇಡು' ಎಂದಂತಾಯಿತು ವಾಂಗ್ ಕೆಲಸ. ವ್ಯಾಕುಲನಾಗಿ ಆತನು ಮನೆಗೆ ಹಿಂತಿರುಗುತ್ತಿರುವಾಗ "ಅಪ್ಪಾ, ಅಮ್ಮಾ, ಅಯ್ಯೋ" ಎಂದು ಯಾರೋ ಅಳುತ್ತಿರುವ ಸದ್ದು ಕೇಳಿಸಿತು. 'ಏನಿದು' ಎಂದು ವಾಂಗ್ ಅಲ್ಲಿಗೆ ಹೋಗಿ ನೋಡಲು, ಹ್ಯೂಯರ್ಕ ಒಬ್ಬ ಮುದುಕಿಯನ್ನು ಚಾಟಿಯಿಂದ, ಚರ್ಮ ಸುಲಿಯುವಂತೆ ಹೊಡೆಯುತ್ತಿದ್ದಾನೆ!

ಅವನು ಹಲ್ಲು ಕಚ್ಚಿಕೊಂಡು "ಇಪ್ಪತ್ತನಾಲ್ಕು, ಇಪ್ಪತ್ತೈದು...." ಎಂದು ಲೆಕ್ಕ ಹಾಕುತ್ತಾ ಹೊಡೆಯುತ್ತಿರುವುದನ್ನು ಕಂಡು ವಾಂಗ್‌ಗೆ ಎದೆ ಬಿರಿಯಿತು. ಕೋಪ ಉಕ್ಕೇ

ಹೆಚ್. ಗುರುದಾಸಪ್ಪ, ಮೈಸೂರು.





ಇನ್ನೆರಡು ದಿನಗಳಲ್ಲಿ ವಾಂಗ್‌ನನ್ನು ಗಲ್ಲಿಗೇರಿಸುವರೆಂದಾಗ, ಆತನ ಸ್ನೇಹಿತರೂ, ಇನ್ನೂ ಆ ಊರಿನಲ್ಲಿದ್ದ ಗಣ್ಯ ಮಹನೀಯರು ಕೆಲವರೂ ಜೊತೆಗೂಡಿ ರಾಜನ ಹತ್ತಿರ ಹೋಗಿ "ಪ್ರಭೂ, ವಾಂಗ್ ತುಂಬಾ ಒಳ್ಳೆಯವನು. ಸತ್ತುಹೋದ ಹ್ಯೂಯರ್ ತೀರಾ ಕೆಟ್ಟವ. ಹ್ಯೂಯರ್ ಮಾಡುತ್ತಿದ್ದ ದೌರ್ಜನ್ಯ ಕೃತ್ಯಗಳನ್ನು ನೋಡಿ ಸಹಿಸಲಾರದೆ ವಾಂಗ್ ಅವನ ಮೇಲೆ ಕೈ ಮಾಡಿದನೇ ಹೊರತು ಮತ್ತೆ ಯಾವಕಾರಣದಿಂದಲೂ ಅಲ್ಲ. ಆದ್ದರಿಂದ ಈ ಸಾರಿ ಕ್ಷಮಿಸಿ, ಬಿಡುಗಡೆ ಮಾಡಿ" ಎಂದು ಪ್ರಾರ್ಥಿಸಿಕೊಂಡರು.

ರಿತು. ತಾನೇನು ಮಾಡುತ್ತಿರುವೆನೋ ತಿಳಿಯದೆ ಅಲ್ಲೊಂದು ಹಾರೆ ಬಿದ್ದಿರಲು ಆದನ್ನು ತೆಗೆದು ಕೊಂಡು ಹ್ಯೂಯರ್ ಎದೆಯಮೇಲೆ ಒಂದು ತಿವಿತ ತಿವಿದ. ಹ್ಯೂಯರ್ ತಕ್ಷಣ ರಕ್ತ ಕಾರುತ್ತಾ ಪ್ರಾಣಬಿಟ್ಟ.

ಕೋಪದ ಅಮಲಿನಲ್ಲಿ ಈ ಕೆಲಸವೇನೋ ಮಾಡಿದ. ಆ ಕೋಪ ಶಮನವಾದ ಮೇಲೆ ವಾಂಗ್ ತಾನು ಮಾಡಿದ ಕಾರ್ಯಕ್ಕೆ ಪಶ್ಚಾತ್ತಾಪಪಟ್ಟ. ನೆಟ್ಟಗೆ ರಾಜನ ಹತ್ತಿರ ಹೋಗಿ "ಪ್ರಭೂ, ನಾನು ಹ್ಯೂಯರ್‌ನನ್ನು ಕೊಂದು ಹಾಕಿದೆ. ನನಗೆ ಉಚಿತ ಶಿಕ್ಷೆ ವಿಧಿಸಿ" ಎಂದು ಕೇಳಿದ. ಅದಕ್ಕೆ ರಾಜನು "ಒಬ್ಬ ಧನಿಕನನ್ನು ಬಡವನೊಬ್ಬನು ಕೊಲ್ಲುವುದೆಂದರೇನು?" ಎಂದು ಉರಿದುಬಿದ್ದು ಮರು ಆಲೋಚನೆ ಮಾಡದೆ ವಾಂಗಿಗೆ ಮರಣದಂಡನೆ ವಿಧಿಸಿದ.

ಆದರೆ ರಾಜ ಜಗ್ಗಲಿಲ್ಲ. ಬಂದ ದಾರಿಗೆ ಸುಂಕವಿಲ್ಲವೆಂದು ಎಲ್ಲರೂ ಹಿಂತಿರುಗುತ್ತಿದ್ದರೆ ಹದಿನಾಲ್ಕು ವರ್ಷದ ಬಾಲಕನೊಬ್ಬನು ರಾಜನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ "ಪ್ರಭೂ, ವಾಂಗ್ ಪ್ರಾಣಕ್ಕೆ ಬದಲಾಗಿ ನನ್ನ ಪ್ರಾಣ ತೆಗೆದುಕೊಳ್ಳಿ" ಎಂದ.

ಆ ಮಾತುಗಳನ್ನು ಕೇಳಿ ರಾಜನಿಗೂ, ಅಲ್ಲಿದ್ದ ಇತರರಿಗೂ ಆಶ್ಚರ್ಯವಾಯಿತು.

"ಯಾರಪ್ಪಾ ನೀನು" ಎಂದು ಕೇಳಿದ ರಾಜ.

"ಪ್ರಭೂ, ನಾನು ವಾಂಗ್ ಮಗ. ನಮ್ಮ ತಾಯಿಗೆ ನಾಲ್ವರು ಗಂಡು ಮಕ್ಕಳು. ಅವರಲ್ಲಿ ನಾನು ಹಿರಿಯವ. ನಾನು ತೀರಿಹೋದರೂ ನಮ್ಮ ತಾಯಿಗೆ ಇನ್ನೂ ಮೂವರು ಮಕ್ಕಳು ಉಳಿದಿರುತ್ತಾರೆ. ಆದುದ

ರಿಂದ ಆಕೆಗೆ ಅಷ್ಟೊಂದು ಚಿಂತೆಯಾಗುವುದಿಲ್ಲ. ನಮ್ಮ ತಂದೆಯಿಲ್ಲದಿದ್ದರೆ ಮಾತ್ರ ಕುಟುಂಬ ಯಾತ್ರೆ ನಡೆಯುವುದೇ ಕಷ್ಟ ಸಾಧ್ಯವಾಗುವುದು" ಎಂದ ಆ ಹುಡುಗ.

ಈ ಮಾತು ಕೇಳಿ ರಾಜನಿಗೆ ಮತ್ತಷ್ಟು ಆಶ್ಚರ್ಯವಾಯಿತು. ಆತನು "ಎಲಾ, ಹೈದಾ, ನಿನ್ನನ್ನು ನಿಮ್ಮ ತಾಯಿ ಕಳುಹಿಸಿದಳೇ?" ಎಂದು ಕೇಳಿದ.

ಆ ಹುಡುಗ "ನಾನು ನಮ್ಮ ತಾಯಿಗೆ ಹೇಳದೆಯೇ ಬಂದಿರುವೆನು. ಏಕೆನ್ನುವಿರೋ, ನಮ್ಮ ತಂದೆ ಉಳಿಯುವುದು ಆಕೆಗೆ ಸಂತೋಷಕರವಾದ ವಿಷಯವೇನೋ ಹೌದು. ಆದರೆ ತನ್ನ ಹೊಟ್ಟೆಯಲ್ಲಿ ಜನಿಸಿದ ಮಗನನ್ನು ಕಳೆದುಕೊಳ್ಳಲು ಯಾವ ತಾಯಿ ತಾನೇ ಇಷ್ಟಪಡುವಳು? ನಿಧಾನವಾಗಿ ಮನಸ್ಸನ್ನು ಹೇಗೋ ಒಂದು ರೀತಿ ಸಮಾಧಾನಪಡಿಸಿಕೊಳ್ಳುವಳೆಂಬ ಧೈರ್ಯದಿಂದ ನಾನೇ ಬಂದೆ" ಎಂದ.

ಅವನ ಮಾತುಗಳನ್ನು ಕೇಳಿ ರಾಜನ ಹೃದಯ ಕರಗಿತು. "ಹೈದಾ, ನಿನ್ನ ಪ್ರಾರ್ಥನೆಯನ್ನು ಅಂಗೀಕರಿಸಿದೆ" ಎಂದ.

ಬಾಲಕನಿಗೆ ಬ್ರಹ್ಮಾನಂದವಾಗಿ ಮತ್ತೊಮ್ಮೆ ರಾಜನಿಗೆ ನಮಸ್ಕಾರ ಮಾಡಿ "ಪ್ರಭೂ, ನಾನು ಧನ್ಯ. ತಮಗೆ ನಾನೆಷ್ಟೋ ಕೃತಜ್ಞನಾದ್ದೇನೆ. ನಾಳೆಯುವರೆವಿಗೂ ಹೇಗೆ ತಡೆಯಲಿ? ಈಗಲೇ ನಮ್ಮ ತಂದೆಯನ್ನು ಸೆರೆಯಿಂದ ಬಿಡಿಸಿ, ಆತನ ಸ್ಥಾನದಲ್ಲಿ



ನನ್ನನ್ನು ಗಲ್ಲಿಗೇರಿಸಿ" ಎಂದು ಪ್ರಾರ್ಥಿಸಿದ. ರಾಜನ ಕಣ್ಣುಗಳಲ್ಲಿ ನೀರು ಜೊಳಜೊಳನೆ ಸುರಿಯಿತು. "ಹುಚ್ಚ, ನಿನ್ನ ಪ್ರಾರ್ಥನೆಯನ್ನು ಅಂಗೀಕರಿಸಿದೆ" ಎಂದು ಹೇಳಿದುದರಲ್ಲಿ ನನ್ನ ಉದ್ದೇಶ ನಿನ್ನ ತಂದೆಯ ಪ್ರಾಣಕ್ಕೆ ಬದಲಾಗಿ ನಿನ್ನ ಪ್ರಾಣ ತೆಗೆಯಬೇಕೆಂದು ಅಲ್ಲ. ನಿನ್ನಂತಹ ಉತ್ತಮ ಬಾಲಕನು ಚಿರಾಯುವಾಗಿ ಬಾಳಬೇಕೇ ಹೊರತು ಇಂತಹ ದುರ್ಮರಣಕ್ಕೆ ತುತ್ತಾಗಬಾರದು. ನಿನ್ನಂತಹ ಸುಪುತ್ರನನ್ನು ಪಡೆದ ವಾಂಗ್ ಸಹ ಉತ್ತಮನೇ ಆದುದರಿಂದ ಶಿಕ್ಷಾರ್ಹನಲ್ಲ. ದುಷ್ಟನಾದ ಹ್ಯೂಯರ್ನನನ್ನು ವಾಂಗ್ ರೂಪದಲ್ಲಿ ದೇವರೇ ಶಿಕ್ಷಿಸಿದ" ಎಂದು ಹೇಳಿ ಕೂಡಲೇ ವಾಂಗ್‌ನನ್ನು ಸೆರೆಯಿಂದ ಬಿಡುಗಡೆ ಮಾಡಿದ.




## ಧನರಾಜರ ಧರ್ಮ!

ಧನರಾಜ ಭಾರೀ ಜಮೀನುದಾರ. ಎಂದೂ ಯಾರಿಗೂ ಒಂದು ಕಾಸಾದರೂ ದಾನ ಧರ್ಮ ಮಾಡಿದ ವ್ಯಕ್ತಿಯಲ್ಲ. ಆತನಿಗೆ ಅವಸಾನಕಾಲ ಸಮೀಪಿಸುತ್ತಿರುವಾಗ ಒಂದು ವದಂತಿ ಹರಡಿತು—ತನ್ನ ಆಸ್ತಿಯನ್ನೆಲ್ಲಾ ಬಡವರಿಗೆ ಹಂಚಿ ಬಿಡುತ್ತಾನೆ ಅಂತ.

ಕೆಲವರು ಆತನ ಬಳಿಸಾರಿ "ನಮ್ಮ ವಿಷಯವೇನು ರಾಯರೇ?" ಎಂದು ಕೇಳಿದರು. ಅದಕ್ಕೆ ಜಮೀನುದಾರನು ಅವರೊಂದಿಗೆ "ಅಪ್ಪಾ, ಪುಣ್ಯ ಪಾಪ ಎನ್ನದೆ, ದೈವ ಚಿಂತೆಯಿಲ್ಲದೆ, ಎರಡು ಕೈಗಳಿಂದಲೂ ಸಂಪಾದಿಸಿ, ಕೂಡಿಹಾಕಿದೆ. ಹತ್ತು ಮಂದಿ ಕೆಟ್ಟರೆ ಒಬ್ಬ ಸುಖಪಡುವನೆಂದು ಹೇಳುವರು. ಹಾಗೆ ನೋಡಿದರೆ ಬಡವರ ಹೊಟ್ಟೆಯ ಮೇಲೆ ಹೊಡೆದು ನಾನಿಷ್ಟು ಧನನಂತನಾದೆ ಎಂದು ಅನ್ನಿಸುತ್ತದೆ. ಈಗಲಾದರೂ ಕೈಸಡಿಲಮಾಡಿ, ಬಡವರ ಹಣ ಬಡವರಿಗೆ ಹಂಚಿ ಬಿಡಬೇಕೆಂದು ನಿಶ್ಚಯಿಸಿದ್ದೇನೆ. ಇಲ್ಲದಿದ್ದರೆ ಹುಟ್ಟಿದ್ದಕ್ಕೆ ಮೋಕ್ಷವುಂಟೇ?" ಎಂದು ಆತ ನುಡಿದ ಯೋಗ್ಯವಾದ ಮಾತಿಗೆ ಜನ ಉತ್ಸಾಹದಿಂದ ಆತನನ್ನು ಮೆಚ್ಚಿ ಹೊಗಳಿದರು.

ಇಷ್ಟರಲ್ಲಿ ಜಮೀನುದಾರರ ಮಕ್ಕಳು ಶೋಕಿಸುತ್ತಾ ಬಂದರು. ಅವರನ್ನು ಸಮಾಧಾನಪಡಿಸುತ್ತಾ ಧನರಾಜ ಈ ರೀತಿ ಹೇಳಿದ. "ಮಕ್ಕಳೇ, ನಾನು ಈ ರೀತಿ ಧರ್ಮ ಮಾಡಿರುವುದಕ್ಕೆ ನೀವೇನೂ ಚಿಂತೆಪಡಬೇಡಿ. ಇದೊಂದುರೀತಿ ಒಳ್ಳೆಯದಕ್ಕೇ ಆಯಿತೆಂದು ತಿಳಿಯಿರಿ. ಏಕೆಂದರೆ ಕೈಯಲ್ಲಿ ಕಾಸಿಲ್ಲದೆ ನಾನು ಜೀವನ ಪ್ರಾರಂಭಿಸಿದೆ. ಸ್ವಯಂ ದುಡಿತದಿಂದ ಈ ಸ್ಥಿತಿಗೆ ಬಂದೆ. ನೀವೂ ಸಹ ನನ್ನಂತೆಯೇ ಪ್ರಯೋಜಕರಾಗಬೇಕೆಂದು ನನ್ನ ಉದ್ದೇಶ" ಎಂದು ಬುದ್ಧಿವಾದ ಹೇಳಿದ.

ಜಮೀನುದಾರ ತನ್ನ ಆಸ್ತಿಯನ್ನು ಆ ಬಡಬಗ್ಗರಿಗೆ ಬರೆದುಕೊಟ್ಟು ಕಣ್ಣು ಮುಚ್ಚಿದ. ಕೊನೆಗೆ ಆತನ ಎಲ್ಲಾ ಲೆಕ್ಕಗಳನ್ನು ನೋಡಲು, ನಗದು ಹಣ ಮುವ್ವತ್ತೈದು ಸಾವಿರ, ಸಾಲ ಒಂದೂವರೆ ಲಕ್ಷ ರೂಪಾಯಿಯೂ ಎಂದು ತಿಳಿದುಬಂತು. ಆಸ್ತಿಗೆ ವಾರಸುದಾರರೆಂದು ಕುಣಿದಾಡುತ್ತಿದ್ದ ಬಡವರೆಲ್ಲರೂ ತಲಾ ಹನ್ನೆರಡು ರೂಪಾಯಿ ಸಾಲಗಾರರಿಗೆ ಕೊಡಬೇಕೆಂದು ಕೋರ್ಟು ಡಿಕ್ರಿ ಕೊಡಲು ಅವರು ಪೆಚ್ಚಾದರು.

## ಅತಿಯಾಸೆ ಗತಿಕೆಡಿಸಿತು

ಒಂದೂರಿನಲ್ಲಿ ಒಬ್ಬ ಆಷಾಡಭೂತಿ ರಾಮಣ್ಣ ಇದ್ದ. ಅವನು ಹಣಕ್ಕಾಗಿ ಯಾವ ಕೆಲಸ ಮಾಡಲೂ ಸಿದ್ಧನಾಗಿದ್ದ. ಈ ವಿಷಯವನ್ನು ಅರಿತ ನೆರೆಯೂರಿನವನೊಬ್ಬನು ಆತನ ಹತ್ತಿರ ಬಂದು 'ಅಪ್ಪಾ, ರಾಮಣ್ಣಾ, ಇಲ್ಲಿಗೆ ಎರಡು ಹರಿದಾರಿ ದೂರದಲ್ಲಿ ಭಾರಿ ಹುತ್ತವೊಂದಿದೆ. ಆ ಹುತ್ತದಲ್ಲಿ ತುಂಬಾ ಮಹಿಮೆಯುಳ್ಳ ಸರ್ಪಗಳಿವೆ. ಆ ಮಹಿಮೆಯುಳ್ಳ ನಾಗರಹಾವುಗಳಿಂದ ಶುಭಪಡೆಯಲು ಜನ ಸದಾ ಆ ಹುತ್ತಕ್ಕೆ ತಾವು ಹರಕೆಹೊತ್ತ ಹಣ ಸಮರ್ಪಿಸುತ್ತಿರುತ್ತಾರೆ. ನನಗೆ ಬುದ್ಧಿ ತಿಳಿದಲಾಗಾಯ್ತು ಅದರಲ್ಲಿ ಹಣ ಬೀಳುತ್ತಿರುವುದನ್ನು ಕಾಣುತ್ತಲೇ ಇದ್ದೇನೆ"ಎಂದ.

"ಹಾಗಾದರೆ ಹುತ್ತವನ್ನು ಅಗೆದು ನೀನು ಧನವೆಲ್ಲಾ ತೆಗೆದು ಕೊಳ್ಳಲಾರದಾದೆಯಾ?" ಎಂದು ಕೇಳಿದ ರಾಮಣ್ಣ. ಅದಕ್ಕೆ ಅವನು "ಅಯ್ಯಪ್ಪೊ—ಹುತ್ತ ಅಗೆಯುವುದೇ? ನಾಗರಹಾವಿನ ಗೋಜಿಗೆ ಹೋದೆವೆಂದರೆ ಎರಡು ಕಣ್ಣುಗಳೂ ಇಂಗಿಹೋದಾವು" ಎಂದ. "ಇದೇ ನಮ್ಮ ಜನರ ಮೂಢನಂಬಿಕೆ. ಆ ಹುತ್ತವಿರುವ ಸ್ಥಳ ನನಗೆ ತೋರಿಸು. ಆದರೆ ಒಂದು ಮಾತು. ಈ ರಹಸ್ಯ ಮತ್ತೆ ಯಾರಿಗೂ ತಿಳಿಯಬಾರದು ಗೊತ್ತಾಯಿತೆ?" ಎಂದು ಒಂದು ಐದು ರೂಪಾಯಿ ಅವನ ಕೈಯಲ್ಲಿಟ್ಟು ಅವನನ್ನು ಕಳುಹಿಸಿದ.

ಅಂದು ರಾತ್ರಿಯೇ ಹತ್ತು ಜನ ಕೂಲಿಯವರನ್ನು ಸಂಗಡ ಕರೆದುಕೊಂಡು ಹುತ್ತವನ್ನು ತೋಡಿಸಿದ. ಹಾವುಗಳನ್ನು ಓಡಿಸಿದ. ಅವರಲ್ಲಿ ಒಂದು ಸರ್ಪ ಕೂಲಿಯವನೊಬ್ಬನನ್ನು ಕಚ್ಚಿತು. ಅವನ ಕುಟುಂಬಕ್ಕೆ ಪರಿಹಾರ ದ್ರವ್ಯ ಕೊಡಬೇಕಾಯಿತು, ರಾಮಣ್ಣ ಕೈಯಿಂದ. ಹುತ್ತದ ತಳದವರೆವಿಗೂ ಅಗೆಸಿ ನೋಡಿದರೆ ಸುಮಾರು ಇನ್ನೂರು ತಾಮ್ರದ ಮೂರು ಕಾಸಿನ ಬಿಲ್ಲೆಗಳು ಕಾಣಿಸಿದವು. ಎಂದರೆ ಮೂರು ರೂಪಾಯಿ ಚಿಲ್ಲರೆ ಆದಂತೆ ಆಯಿತು. ನೆರೆಯೂರಿನವನಿಗೆ ಬಹುಮಾನ ಕೂಲಿಯವನ ಕುಟುಂಬಕ್ಕೆ ಪರಿಹಾರ ದ್ರವ್ಯ ಆತನು ಕೈಯಿಂದ ಕೊಡಬೇಕಾಯಿತು. ಆತನ ಪ್ರಯಾಸಕ್ಕೆಲ್ಲಾ ದೊರೆತ ಬಹುಮಾನ ಅಂದರೆ ಕೇವಲ ಮೂರೂ ರೂಪಾಯಿ ಚಿಲ್ಲರೆ ಮಾತ್ರ! ಈ ಪರಾಭವಕ್ಕೆ ರಾಮಣ್ಣ ನಾಚಿಕೆಪಟ್ಟು, ಬುದ್ಧಿ ತಂದುಕೊಂಡ.

"ಝಣ! ಝಣ! ಝಣ!
ಜೇಬು ತುಂಬ ಹಣ!
ಮೇಲಕೆತ್ತಿ
ಬಿಡಲು ಸದ್ದು
ಠಣ! ಠಣ! ಠಣ!"

"ಬೇವಿನಕಾಯಿ ಕಹಿ!
ಜೇನುತುಪ್ಪ ಸಿಹಿ!
ಎಂದು ಪಾಪ
ಬೆರಳ ಚೀಪಿ
ನಕ್ಕಿ 'ಶಿಪ್ಪು, ಹಿಹಿ"

[ಶಾಮುಕುಲಕರ್ಣಿ, ವಿಜಾಪೂರ]



# ಸ್ವರ್ಣಕೂಪ



ಒಂದು ಹಳ್ಳಿಯಲ್ಲಿ ವಿಕ್ರಮನೆಂಬ ಬಡ ಹುಡುಗನಿದ್ದನು. ತನ್ನ ಊರಿನಲ್ಲಿ ಹೊಟ್ಟೆ ಪಾಡು ಕಳೆಯುವುದು ಕಷ್ಟಕರವಾದುವರಿಂದ, ಅವನು ಒಂದು ಪಟ್ಟಣವನ್ನು ಸೇರಿ, ಮಾರ್ಕೆಟ್ಟು ಚೌಕದಲ್ಲಿ ನಿಂತು, ಕಂಡಕಂಡವರೊಂದಿಗೆ "ಸ್ವಾಮಿ, ನಿಮಗೊಬ್ಬ ನೌಕರನು ಬೇಕೇ?" ಎಂದು ಕೇಳುತ್ತಿದ್ದ. "ನಮಗೆ ಬೇಡ" "ನಮಗೆ ಬೇಡ" ಎಂದು ಹೇಳುತ್ತಾ ಜನ ಮುಂದೆ ಸರಿಯುತ್ತಿದ್ದರು.

ಹೊತ್ತು ಮುಳುಗುವ ಸಮಯಕ್ಕೆ ಥಳಥಳನೆಂದು ಮೆರೆಯುವ ಜರತಾರಿ ಉಡುಪನ್ನು ಧರಿಸಿದ ಒಬ್ಬ ವರ್ತಕನು ಬಂದ. ಆತನ ಉಡುಪನ್ನು ನೋಡಿದರೆ ತುಂಬಾ ಧನವಂತನಾಗಿ ಕಾಣಬಂದರೂ, ಮುಖ ನೋಡಿದರೆ ಮಾತ್ರ ಗೂಬೆಯಿರುವಂತೆ ಇದ್ದನಾದುದರಿಂದ, ವಿಕ್ರಮನಿಗೆ ಆತನಕೂಡ ಮಾತನಾಡುವ ಮನಸ್ಸು ಬರಲಿಲ್ಲ. ಆ ವರ್ತಕನೇ ವಿಕ್ರಮನನ್ನು ಮಾತನಾಡಿಸಿ "ಎಲೆ ಹುಡುಗಾ, ನನಗೊಬ್ಬ ನೌಕರನು ಬೇಕು. ದಿನಾ ಹತ್ತು ರೂಪಾಯಿ ಸಂಬಳ ಕೊಡುತ್ತೇನೆ. ಬರುವೆಯಾ?" ಎಂದ. ವಿಕ್ರಮ ಒಪ್ಪಿಕೊಂಡು ಆ ವರ್ತಕನನ್ನು ಹಿಂಬಾಲಿಸಿದ.

ವರ್ತಕನು ನದೀತೀರಕ್ಕೆ ಬಂದು, ತನ್ನ ಹಡಗಿನಲ್ಲಿ ವಿಕ್ರಮನನ್ನು ಕೂರಿಸಿಕೊಂಡು, ಮನೆಗೆ ಹೋದ. ಆ ಮನೆ ತುಂಬಾ ವಿಚಿತ್ರವಾಗಿತ್ತು. ಅದು ಸಮುದ್ರದಲ್ಲಿದ್ದ ಒಂದು ಭಾರಿ ಬೆಟ್ಟದ ಪಕ್ಕದಲ್ಲಿದ್ದ ದಿವ್ಯ ಭವನ. ಗೋಡೆಗಳೆಲ್ಲವೂ ಬಂಗಾರದ್ದು! ತೊಲೆಗಳು ಬೆಳ್ಳಿಯಿಂದ ಮಾಡಲ್ಪಟ್ಟಿದ್ದವು. ವಿಕ್ರಮನು ಆಶ್ಚರ್ಯದಿಂದ ಆ ವರ್ತಕನ ಹಿಂದೆಯೇ ಭವನದೊಳಗೆ ಪ್ರವೇಶಿಸಿದ. ಅವರಿಗೆ ಹದಿನಾರು ವಯಸ್ಸಿನ ತರುಣಿಯೊಬ್ಬಳು ಎದುರಾದಳು. ಆಕೆಯ ಹೆಸರು ಬಾಲಾಮಣಿ. ಆ ತರುಣಿಯ ಶರೀರಕಾಂತಿ ಬಂಗಾರದ ಕಾಂತಿಯನ್ನು ಮೀರಿಸಿತ್ತು. ಆ ಹುಡುಗಿಯ ಅಂದವನ್ನು ಕಂಡು ವಿಕ್ರಮನು ಬೆರಗಾದ. ವಿಕ್ರಮನೂ ಸಹ ಶಕ್ತಿವಂತ. ಶೂರ. ಆತನನ್ನು ನೋಡಿದ ಕೂಡಲೇ ಆ ತರುಣಿಗೂ ಮನವು ಚಲಿಸಿತು. ಚಿಂತೆ ಮತ್ತು ಮರುಕಗಳಿಂದ ಮಿಳಿತವಾದ ಆಕೆಯ ಕಣ್ಣುಗಳನ್ನು

ಎ. ಯೆಂ. ಜಯ, ಎ. ಯೆಂ. ಸರೋಜ, ಬೆಂಗಳೂರು.

ನೋಡಿದ ವಿಕ್ರಮ. ಆಕೆಯ ಮುಖದಲ್ಲುಂಟಾದ ಬದಲಾವಣೆ ಗೂಬೆರಾಯರಿಗೆ ತಿಳಿಯದೇ ಹೋದರೂ ಬುದ್ಧಿವಂತನಾದ ವಿಕ್ರಮ ಕಂಡು ಹಿಡಿದ. ಈ ರೀತಿ ಆಕೆ ಮರುಕ ತೋರಿಸಲು ಕಾರಣ ಮಾತ್ರ ಊಹಿಸಲಾರದಾದ.



ಗೂಬೆರಾಯರು ವಿಕ್ರಮನಿಗೆ ರಾತ್ರಿ ಊಟವಿಡಿಸಿ "ಹೈದಾ, ಬೇಗ ಮಲಗಿಕೋ. ನಾವು ಬೆಳಗಿನ ಜಾವದಲ್ಲೇ ಎದ್ದು ಒಂದು ಜಾಗಕ್ಕೆ ಹೋಗಬೇಕು" ಎಂದು ಅವನು ಮಲಗಿಕೊಳ್ಳಲು ಒಂದು ಕೋಣೆ ತೋರಿಸಿದ. ರಾಯರು ಅವರು ಮಲಗುವ ಕೋಣೆಯನ್ನು ಸೇರಿಕೊಂಡಮೇಲೆ, ಬಾಲಾಮಣಿ ಸದ್ದಿಲ್ಲದಂತೆ ಮೆಲ್ಲನೆ ವಿಕ್ರಮನಿದ್ದ ಕೋಣೆಗೆ ಬಂದು ಕಾಗದದಲ್ಲಿ ಸುತ್ತಿದ್ದ ಒಂದು ಗಾಜಿನ ಸೀಸೆಯನ್ನು ಆತನ ಕೈಯಲ್ಲಿಟ್ಟು, ಒಂದು ಮಾತನ್ನಾದರೂ ಆಡದೆ ಹೊರಟುಹೋದಳು. ವಿಕ್ರಮನು ಆಶ್ಚರ್ಯಪಡುತ್ತಾ, ಆ ಕಾಗದವನ್ನು ಬಿಚ್ಚಿನೋಡಲು ಅದರಲ್ಲಿ ಈ ರೀತಿ ಬರೆದಿತ್ತು. "ನಿನಗೇನಾದರೂ ಆಪತ್ತು ಸಂಭವಿಸಿದರೆ ಈ ಗಾಜಿನ ಸೀಸೆಯನ್ನು ಒಡೆ"

ಸಮಯಕ್ಕೆ ಸಹಾಯವಾದೀತೆಂದು ಅದನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು, ನಿದ್ದೆ ಹೋದ ವಿಕ್ರಮ.

ಬೆಳಗಿನ ಜಾವವೇ ಗೂಬೆರಾಯರು ಎದ್ದು ಬಂದು, ವಿಕ್ರಮನನ್ನು ಎಬ್ಬಿಸಿ, ತಮ್ಮೊಂದಿಗೆ ಬರುವಂತೆ ಅಪ್ಪಣೆ ಮಾಡಿದರು. ಒಂದು ಕುದುರೆಯ ಮೇಲೆ ಕೆಲವು ಗೋಣಿಚೀಲಗಳನ್ನು ಹಾಕಿ, ವಿಕ್ರಮನನ್ನು ಅದರ ಜೀನು ಹಿಡಿದು ನಡೆಸಿಕೊಂಡು ಬರುವಂತೆ ಆಜ್ಞಾಪಿಸಿದರು. ಅವರಿಬ್ಬರೂ ಆ ಕುದುರೆಯೊಂದಿಗೆ ಬೆಟ್ಟವೇರಿದರು. ಮೇಲಕ್ಕೆ ಹೋಗುತ್ತಾ ಬೆಟ್ಟದ ತುದಿಯಲ್ಲಿ ಒಂದು ತಾಳೆಮರದಷ್ಟು ಎತ್ತರದ ನುಣ್ಣನೆಯ ಶಿಲೆ ಕಾಣಿಸಿತು. ಆ ಶಿಖರದ ನಾಲ್ಕೂ ಕಡೆಯೂ ಅದೇ ರೀತಿ ಯಿತ್ತು.

"ನಾಲ್ಕು ಕಡೆಯೂ ದೊಡ್ಡ ಕಲ್ಲು ಪೆಟ್ಟಿಗೆಯಂತೆ ಕಾಣುತ್ತಿರುವ ಈ ಶಿಖರದ ಮೇಲಕ್ಕೆ ಹೋದರೆ ಅಲ್ಲಿ ಬಂಗಾರದ ಸಣ್ಣ ಸಣ್ಣ ಗಟ್ಟಿಗಳು ಹಳ್ಳದಲ್ಲಿ ಕಾಣಿಸುವುದು. ಅದರ ಸಲುವಾಗಿಯೇ ನಾವಿಲ್ಲಿಗೆ ಬಂದಿದೇವೆ" ಎಂದ ಗೂಬೆರಾಯ.



ಹೀಗೆಂದು ಹೇಳಿ ಆಯಾಸ ಪರಿಹಾರ ಮಾಡಿಕೊಳ್ಳಲು ತಂದಿದ್ದ ಷರಬತ್ತಿನ ಸೀಸೆಗಳಲ್ಲಿ ದೊಡ್ಡದನ್ನು ವಿಕ್ರಮನ ಕೈಗೆ ಕೊಟ್ಟು ತಾನು ಚಿಕ್ಕ ಸೀಸೆ ತೆಗೆದುಕೊಂಡು ಕುಡಿದುಬಿಟ್ಟ. ವಿಕ್ರಮನು ಆತನ ಔದಾರ್ಯವನ್ನು ಮೆಚ್ಚಿಕೊಳ್ಳುತ್ತಾ ಆ ಸೀಸೆ ಷರಬತ್ತನ್ನು ಎರಡೇ ಗುಟುಕಿನಲ್ಲಿ ಕುಡಿದುಬಿಟ್ಟ. ಕುಡಿದ ಕೂಡಲೇ ಆತನ ಕಣ್ಣುಗಳು ಮುಚ್ಚಿಕೊಂಡು ನಿದ್ದೆ ಬಂದು ಬಿಟ್ಟಿತು.

ಗೂಬೆರಾಯ ಕೂಡಲೇ ಕುದುರೆಯ ಮೇಲೆ ಹಾಕಿದ್ದ ಚೀಲಗಳಿಂದ ಒಂದು ತೊಗಲಿನ ಚೀಲವನ್ನು ತೆಗೆದು, ನಿದ್ದೆ ಮಾಡುತ್ತಿದ್ದ ವಿಕ್ರಮನನ್ನು ಅದರಲ್ಲಿ ತುರುಕಿ, ಆತನ ಪಕ್ಕದಲ್ಲಿ ಬಿದ್ದಿದ್ದ ಒಂದು ಕಬ್ಬಿಣದ ಸಲಾಕೆ ಕೂಡ ಇಟ್ಟು ಕಟ್ಟಿ ಹಾಕಿದ. ಆ ಚೀಲವನ್ನು ಅಲ್ಲಿಯೇ ಬಿಟ್ಟುಬಿಟ್ಟು ಕುದುರೆಯೊಂದಿಗೆ ತುಸ ದೂರದಲ್ಲಿ ಹೋಗಿ ನಿಂತುಕೊಂಡ. ಕೂಡಲೇ ಶಿಖರದ ಮೇಲೆ ಕುಳಿತಿದ್ದ ಕಾಗೆಗಳು ಕೆಳಕ್ಕೆ ಹಾರಿದವು. ಅವುಗಳಿಗೆ ಕಬ್ಬಿಣದ ಮೂಗು, ಉಕ್ಕಿನ ರೆಕ್ಕೆಗಳೂ ಇದ್ದವು. ಇಳಿದು ಬಂದ ಆ ಕಾಗೆಗಳು ವಿಕ್ರಮನೊಂದಿಗೆ ಆ ತೊಗಲಿನ ಚೀಲವನ್ನೆತ್ತಿಕೊಂಡು ಹೋಗಿ, ಆ ಕಲ್ಲಿನ ಕೊಳವೆಯಲ್ಲಿ ಬೀಳಿಸಿದವು. ಬೀಳಿಸಿ, ತಮ್ಮ ಕಬ್ಬಿಣದ ಕೊಕ್ಕುಗಳಿಂದ ಆ ಚೀಲವನ್ನು ಚುಚ್ಚಲು ಪ್ರಾರಂಭಿಸಿದವು.

ಸ್ವಲ್ಪ ಸಮಯವಾದ ತರುವಾಯ ವಿಕ್ರಮನಿಗೆ ಪ್ರಜ್ಞೆ ಬಂದು "ಈ ಕಾಗೆಗಳೇನು? ಈ ಚೀಲವೇನು? ನಾನಿಲ್ಲಿಗೆ ಹೇಗೆ ಬಂದೆ" ಎಂದು ಕೊಳ್ಳುತ್ತಾ ಚೀಲದಿಂದ ಹೊರಬಿದ್ದ. ಹಾಗೆ ಹೊರಬೀಳುವಾಗ, ತನ್ನ ಪಕ್ಕಕ್ಕೆ ತಗುಲಿದ ಸಲಾಕೆ ತೆಗೆದುಕೊಂಡು ಕಾಗೆಗಳನ್ನು ಓಡಿಸಿದ. ಹಾಗೇ ನಿಂತು ಆಯಾಸ ಪರಿಹಾರ ಮಾಡಿಕೊಳ್ಳುತ್ತಿರುವಷ್ಟರಲ್ಲಿ, ಕೆಳಗಿನಿಂದ ಒಂದು ಧ್ವನಿ ಕೇಳಿಸಿತು. "ಮತ್ತೆ ಕಾಗೆಗಳು ಸುತ್ತುವರಿಯದಂತೆ ಆ ಕಬ್ಬಿಣದ ಮೊರದಿಂದ ಬಂಗಾರದ ಗಟ್ಟಿಗಳನ್ನು ಹೊರಗೆ ಹಾಕು" ಎಂದು ಹೇಳಿದ ಗೂಬೆರಾಯ.

ಕೂಡಲೇ ವಿಕ್ರಮನು ಅದೇ ರೀತಿ ಬಂಗಾರದ ಗಟ್ಟಿಗಳನ್ನು ಎತ್ತಿ ಕೆಳಗೆ ಸುರಿದ. ಗೂಬೆರಾಯರು ಅದನ್ನು ಗೋಣೀಚೀಲಗಳಲ್ಲಿ ತುಂಬಿ. "ಇನ್ನು ಸಾಕು" ಎಂದು ಹೇಳಿ, ಚೀಲಗಳನ್ನು ಕುದುರೆಯಮೇಲೇರಿಸಿ, ಮೆಲ್ಲನೆ

ಮನೆಕಡೆ ಮುಖ ಮಾಡಿದ. ವಿಕ್ರಮನು ತನ್ನನ್ನು ಬಿಟ್ಟು ಹೋಗುತ್ತಿದ್ದ ಗೂಬೆರಾಯ ನನ್ನು ನೋಡಿ "ಏನಯ್ಯಾ ನನ್ನ ವಿಷಯ ವೇನು?" ಎಂದು ಗಟ್ಟಿಯಾಗಿ ಅರಚಿದ.

ರಾಯನು ವಿಕಾರವಾಗಿ ನಗುತ್ತಾ "ನಿನ್ನ ಮಾತೇ? ಆ ಕಣಿಯಲ್ಲಿ ಬಿದ್ದಿರುವ ರುಂಡ ಗಳನ್ನು ಎಣಿಸು. ತೊಂಬತ್ತೊಂಬತ್ತು ಇರು ತ್ತವೆ. ನೀನು ನೂರನೆಯವನು. ಅಹ್ಹಾ ಹ್ಹಾ" ಎಂದು ಹಿಂದಕ್ಕೂ ಸಹ ತಿರುಗಿ ನೋಡದೆ ಹೊರಟು ಹೋದ.



"ಎಂತಹ ಧೂರ್ತನಿವನು. ಇದರಿಂದಲೇ ದಿನಾ ಹತ್ತು ರೂಪಾಯಿ ಸಂಬಳ ಕೊಡಲು ಸಿದ್ಧನಾದ" ಎಂದುಕೊಂಡು ಸುತ್ತಲೂ ನೋಡಲು ಯಮಕಿಂಕರರಂತೆ ಕಾಗೆಗಳು ಕಾಣಿಸಿದವು 'ಎರಡು ಮೂರು ದಿನಗಳಲ್ಲಿ ಉಪವಾಸದಿಂದ ನನ್ನ ಶಕ್ತಿ ಉಡುಗುವುದು. ಆಗ ಈ ಕಾಗೆಗಳೊಂದಿಗೆ ಹೋರಾಡ ಲಾರದೆ, ಇವುಗಳಿಗೆ ಬಲಿಯಾಗಬೇಕಾಗುವು ದೇನೋ' ಎಂದು ಅಧೈರ್ಯಪಟ್ಟ. ಆದರೂ ಮನಸ್ಸು ಗಟ್ಟಿ ಮಾಡಿಕೊಂಡು, ಬಿಸಿಲಿನ ತಾಪಕ್ಕೆ ತಾಳಲಾರದೆ, ತೊಟ್ಟಿದ್ದ ಅಂಗಿ ಯನ್ನು ಕಳಚುತ್ತಿರಲು ಸೊಂಟಕ್ಕೆ ಸೇರಿಸಿದ್ದ ಗಾಜಿನ ಸೀಸೆ ಕೈಗೆ ಸಿಕ್ಕಿತು. ಕೂಡಲೇ ಆತನಿಗೆ ಬಾಲಾಮಣಿ ಬರೆದ ಚೀಟಿಯ ವಿಷಯ ಜ್ಞಾಪಕಕ್ಕೆ ಬಂತು. ಗಾಜಿನ ಸೀಸೆ ಕೆಳಗೆ ಹಾಕಿದ.

ಅದು ಭಾರಿ ಶಬ್ಧದೊಂದಿಗೆ ಚೂರು ಚೂರಾಯಿತು. ಅದರಿಂದ ಭೀಕರ ಭೂತ ವೊಂದು ಹೊರಬಿದ್ದು ವಿಕ್ರಮನ ಮುಂದೆ ನಿಂತಿತು. "ಎಲೈ ಮಾನವನೇ, ಒಬ್ಬ ಮುನೀಶ್ವರನು ಕುಪಿತನಾಗಿ ನನ್ನನ್ನು ಈ ಸೀಸೆ ಯಲ್ಲಿ ಬಂಧಿಸಿಟ್ಟನು. ಸಾವಿರಾರು ವರ್ಷ ಗಳಿಂದ ನಾನಿದರಲ್ಲಿರಬೇಕಾಗಿ ಬಂತು. ಇನ್ನು ಒಂದು ಕ್ಷಣವಾದರೂ ತಡೆಯಲಾರೆ. ನಿನ ಗೊಂದು ಉಪಕಾರ ಮಾಡಿ ಹೋಗುವೆನು. ಏನಾದರೂ ಕೋರಿಕೋ" ಎಂದಿತು. "ಈ ಮೃತ್ಯುಕೂಪದಿಂದ ನನ್ನನ್ನು ರಕ್ಷಿಸು" ಎಂದ ವಿಕ್ರಮ. ಮರುಕ್ಷಣದಲ್ಲಿ ವಿಕ್ರಮನು ತಾನು ಹಿಂದೆ ಗೂಬೆರಾಯರನ್ನು ಸಂಧಿಸಿದ ಮಾರ್ಕೆಟ್ಟು ಚೌಕದಲ್ಲಿದ್ದ.

ವಿಕ್ರಮನು ಧೈರ್ಯವಹಿಸಿ, ಗಡ್ಡ ವಿಾಸೆ ಗಳು ಮಾರುವ ಅಂಗಡಿಗೆ ಹೋಗಿ ಒಂದು

ಜೊತೆ ಕೊಂಡು ಮಾರುವೇಷ ಹಾಕಿಕೊಂಡು ಅಲ್ಲಲ್ಲೇ ಸುಳಿದಾಡುತ್ತಿದ್ದ.

ಕೆಲವು ದಿನಗಳಾದ ಮೇಲೆ, ಗೂಬೆರಾಯ ಆ ಮಾರ್ಕೆಟ್ಟಿಗೆ ಬಂದು, ನೌಕರನಿಗಾಗಿ ನೋಡುತ್ತಿದ್ದ. ಮಾರುವೇಷದಲ್ಲಿದ್ದ ವಿಕ್ರಮ ಮತ್ತೆ ಅವನ ಸೇವಕನಾಗಿ ಸೇರಿದ. ಗೂಬೆರಾಯನಿಗೆ ವಿಕ್ರಮನ ಗುರುತು ಸಿಕ್ಕಲಿಲ್ಲ. ಹಿಂದಿನಂತೆಯೇ ರಾಯ ನೊಂದಿಗೆ ಹಡಗಿನಲ್ಲಿ ಹೋಗಿ ಬಂಗಾರದ ಭವನವನ್ನು ಸೇರಿಕೊಂಡ. ಹೋದಸಲ ಆದಂತೆಯೇ ಬೆಳಗಿನ ಜಾವ ಅವರಿಬ್ಬರೂ ಶಿಖರದ ಅಭಿಮುಖವಾಗಿ ನಡೆದರು.

ಈಸಾರಿ ಮಾತ್ರ ವಿಕ್ರಮನು ಸೀಸೆಗಳಲ್ಲಿದ್ದ ಷರಬತ್ತನ್ನು ತಾರುಮಾರು ಮಾಡಿ, ಮದ್ದು ಸೇರಿಸಿದ್ದ ಷರಬತ್ತನ್ನು ಗೂಬೆರಾಯನಿಗೆ ಕುಡಿಸಿ, ಅವನು ನಿದ್ದೆಯಲ್ಲಿ ಮುಳುಗಿದ ಕೂಡಲೇ ತೊಗಲಿನ ಚೀಲದಲ್ಲಿ ತುರುಕಿ, ಆ ಕಾಗೆಗಳಿಗೆ ಒಪ್ಪಿಸಿದ. ಅವು ಯಥಾಪ್ರಕಾರ ಅದನ್ನು ಹೊತ್ತುಕೊಂಡು ಹೋಗಿ ಬಾವಿ ಯಲ್ಲಿ ಹಾಕಿ, ತಮ್ಮ ಮೊನಚಾದ ಕೊಕ್ಕು ಗಳಿಂದ ಚುಚ್ಚುತ್ತಿದ್ದವು. ರಾಯನಿಗೆ ಎಚ್ಚರ ವಾಯಿತು. "ಅಯ್ಯೊ, ಅಪ್ಪಾ" ಎಂದು ಬಾಧೆ ತಾಳಲಾರದೆ ಕಿರಿಚಿದ. ಕೆಳಗಿದ್ದ ವಿಕ್ರಮನು ತನ್ನ ಮಾಯಾಗಡ್ಡವನ್ನು ತೆಗೆದು, ರಾಯನ ಮೇಲೆ ಬೀಳುವಂತೆ ಎಸೆದು "ಅಯ್ಯೋ ಅಪ್ಪಾ ಅಂತ ಅಲಕ್ಷ್ಯ ಮಾಡಬೇಡ ಬೇಗಬೇಗ ಬಂಗಾರದ ಗಟ್ಟಿಗಳನ್ನು ಎತ್ತಿ ಕೆಳಗೆ ಹಾಕು" ಎಂದು ಆಜ್ಞಾಪಿಸಿದ.

ರಾಯ ಬಾಯಿ ಬಿಚ್ಚದೆ, ವಿಕ್ರಮನು 'ಸಾಕು' ಎನ್ನುವಷ್ಟು ಬಾಚಿ ಹೊರಗೆ ಹಾಕುತ್ತಿದ್ದ. ಅವುಗಳನ್ನೆಲ್ಲಾ ಚೀಲದಲ್ಲಿ ತುಂಬಿ, ಕುದುರೆ ಮೇಲೆ ಹೇರಿ ಮನೆಕಡೆ ನಡೆದ ವಿಕ್ರಮ. ಇದನ್ನು ನೋಡಿ ರಾಯ "ಕಾಪಾಡು, ಕಾಪಾಡು" ಎಂದು ರೋದಿಸಿದ. ಆಗ ವಿಕ್ರಮನು "ನಿನ್ನನ್ನು ರಕ್ಷಿಸು ವುದು ಸಾಧ್ಯವಿಲ್ಲ. ನೀನು ಕೆಳಗೆ ಬಂದು ಮಾಡುವುದಾದರೂ ಏನಿದೆ. ಅಲ್ಲೇ ಇರು ಮಹಾಶಯ. ನಿನಗೆ ಕಾಗೆಗಳ ಸಂಗಡ ಊಟ ಕಳುಹಿಸುತ್ತೇನೆ. ನನಗೆ ಬೇಕಾದಾಗಲೆಲ್ಲಾ ಬಂಗಾರದ ಗಟ್ಟಿಗಳನ್ನು ತೆಗೆದು ಹಾಕುವೆ ಯಂತೆ" ಎಂದು ಹೇಳಿ ಬಂದ ದಾರಿ ಹಿಡಿದು ಬಾಲಾಮಣಿಯನ್ನು ಸೇರಿಕೊಂಡ.



## ಒಗಟುಗಳು

1. ಮೊದಲು ಬಾ ಎಂದೆನುತ।
ಎದುರಿರಿಸಿ ಪೂ ಸಹಿತ।
ಮುದದಿ ಜೀ ಎನಲಾಗಬರುವ ನಸುನಗುತ।
ಇದುಯಾರು ? ಹೇಳೆನುತ।
ವಿಧಿಸಿರುವೆನನವರತ।
ಹೃದಯ ಮಂದಿರದಲ್ಲಿ ಪ್ರಭೆಯನೀವಾತ॥

2. ಎದುರಿಗೊಬ್ಬ ನೆ ಬಂದು।
ಉದಯವಾಗಿ ಹ ನೆಂದು।
ಸುದ್ದಿ ಯನ್ನೊರೆದಿಹ ರು ಮತ್ತೆನಡೆದಂದು।
ಇದನರಿತು ಹೇಳೆಂದು।
ಮೋದದಿಂದಲಿ ಬಂದು।
ಹುದುಗಿರುವುದೆಲ್ಲರಾ ಹೃದಯದೊಳಗಿಂದು

—ಪುಟ್ಟ.

## ಕೋಗಿಲೆ

ಕಪ್ಪು ಬಣ್ಣದ ಉದ್ದಕೊಕ್ಕಿನ
ಇಂಪು ಕಂಠದ ಕೋಗಿಲೆ
ಮರಿಯುಮಾಡಲು ಅರಿಯಲಾರದ
ಮುಗ್ಧ ಪಕ್ಷಿಯೆ ಕೋಗಿಲೆ
ಬಾಲ್ಯತನದಲಿ ಕಾಗೆಜೊತೆಯಲಿ
ಬೆಳೆದು ಬರುವ ಕೋಗಿಲೆ
ರೆಕ್ಕೆಬಲಿತೊಡೆ ಸಖ್ಯತೊರೆಯುತ
ವನವ ಸೇರುವ ಕೋಗಿಲೆ
ಸಂಜೆ ತಂಪಲಿ ಎಳೆಯ ರೆಂಬೆಲಿ
ಇಂಪು ಹಾಡುವ ಕೋಗಿಲೆ
ಮುದ್ದು ಬಾಲರು ಸದ್ದುಮಾಡದೆ
ಕದ್ದು ನೋಡುವ ಕೋಗಿಲೆ.

—ಕಸ್ತೂರಿ, ಬೆಂಗಳೂರು.

## ಯಾರಿಗೆ ಬಹುಮಾನ ?

ರಜೆಯಲಣ್ಣ ಮನೆಗೆ ಬಂದ
ರಾಗಮಾಲೆಯೊಂದ ತಂದ.
ಯಾರಿಗೆ ಬಹುಮಾನವೆಂದ
ಶೀನು, ರವಿಯು ಓಡಿಬಂದ್ರು
ತಮಗೆ ಎಂದು ಛಲವ ಹಿಡಿದ್ರು
ತಮ್ಮ ರವಿಗೆ ಮೂರು ವರುಷ
ಹಿರಿಯ ಶೀನು ಆರು ವರುಷ
ಅದಕೆ ಅಣ್ಣ ರಾಗ ಮಾಲೆ
ಕಿರಿಯ ರವಿಗೆ ಕೊಟ್ಟು ಬಿಟ್ಟ;
ಆದರವನು ಊದಲಾರ
ಶೀನು ಮಾತ್ರ ಊದಬಲ್ಲ
ರಾಗಮಾಲೆ ರವಿಗೆ ಆದ್ರು
ಊದುವವನು ಶ್ರೀನಿವಾಸ
ಇಬ್ಬರಿಗೂ ಇನಾಮು ಆಯ್ತು.

—ಕೆ. ಜಿ. ಧ್ರುವ.

## ನಗೆ—ಹನಿ

ಗೋವಿಂದ—ಲೋ, ರಾಮು ನೀನು ಹಾಕಿಕೊಂಡಿರುವ ಕಾಲು ಚೀಲ ವಿಚಿತ್ರವಾಗಿದೆಯಲ್ಲಾ! ಒಂದು ಕೆಂಪು! ಒಂದು ಹಸರು!

ರಾಮು—ಹೌದು ಕಣೋ, ಇಂಥಾದ್ದೇ ಇನ್ನೊಂದು ಜೊತೆ ಕಾಲು ಚೀಲ ಮನೆಯಲ್ಲಿದೆ.

—ಎಸ್. ಜಿ. ಗುಪ್ತ.

ಒಗಟುಗಳ—ಉತ್ತರ :

1. ಬಾಪೂಜಿ, 2. ನೆಹರು.

PROF. SORCAR

## ಬಣ್ಣ ಬದಲಾಯಿಸುವ ಚೆಂಡು

ಇಂದ್ರಜಾಲಕನು ಗುಂಡನೆಯ ಟ್ಯೂಬು ಜೋಡಿಸಿದ ನಿಕ್ಕಲ್ ಸ್ಟಾಂಡ್ ಒಂದನ್ನೂ, ಮಾಮೂಲು ಬಿಳಿ ರಬ್ಬರು ಚೆಂಡನ್ನೂ ಸಭೆಗೆ ತರುತ್ತಾನೆ. ಆ ಚೆಂಡನ್ನು ಟ್ಯೂಬ್ ಮೇಲಿಟ್ಟು ಸ್ವಲ್ಪ ಒತ್ತಿ ಇಳಿಬಿಟ್ಟರೆ ಕೆಳಗೆ ಬರುತ್ತದೆ. ಇಂದ್ರಜಾಲಕನು ಆ ಚೆಂಡನ್ನು ತೆಗೆದುಕೊಂಡು "ಈಸಾರಿ ಇದನ್ನು ಮೇಲಿಂದ ಹೀಗೇ ಬಿಟ್ಟರೆ ನೀಲೀ ಚೆಂಡಾಗಿ ಬದಲಾಯಿಸುತ್ತಿದೆ. ನೋಡಿ" ಎಂದು ಹೇಳುವನು.

ಈಗ ಎರಡನೇ ಸಾರಿ ಆ ಬಿಳಿಚೆಂಡನ್ನು ಟ್ಯೂಬಿನಲ್ಲಿ ಇಳಿಬಿಟ್ಟರೆ ಕೆಳಗೆ ಬರುವವೇಳೆಗೆ ನಿಜವಾಗಿ ಆ ಚೆಂಡು ನೀಲಿಚೆಂಡಾಗಿ ಬದಲಾಯಿಸುತ್ತದೆ. ಪ್ರೇಕ್ಷಕರು ಆಶ್ಚರ್ಯಚಕಿತರಾಗಿ "ಎಲ್ಲೀ, ಹಾಗಾದರೆ ಈ ನೀಲಿಚೆಂಡನ್ನು ಬಿಳಿಚೆಂಡಾಗಿ ಮಾಡಿ" ಎಂದು ಕೇಳುವರು. ಇಂದ್ರಜಾಲಕನು ಆ ನೀಲಿಚೆಂಡನ್ನು ತೆಗೆದುಕೊಂಡು ಟ್ಯೂಬಿನಿಂದ ಇಳಿಬಿಟ್ಟರೆ ಕೆಳಗೆ ಬೀಳುವ ವೇಳೆಗೆ ಅದು ಬಿಳಿಚೆಂಡಾಗಿ ಬದಲಾಯಿಸುವುದು.

ಇದರ ಗುಟ್ಟೆಲ್ಲಾ ಇಷ್ಟೇ. ನಿಜವಾಗಿ, ನಿಕ್ಕಲ್ ಸ್ಟಾಂಡಿನಲ್ಲಾಗಲೀ, ಟ್ಯೂಬಿನಲ್ಲಾಗಲೀ ಯಾವುದೇ ಮಂತ್ರವಿರುವುದಿಲ್ಲ. ಮೊದಲು ಅದನ್ನು ಸಿದ್ಧಪಡಿಸಿಕೊಳ್ಳುವಾಗಲೇ ಚೆಂಡನ್ನು ಟ್ಯೂಬಿನೊಳಗೆ ಇಳಿಬಿಟ್ಟರೆ ಕೆಳಗೆ ಬೀಳುವಂತೆ ಮಾಡಿಸಿಟ್ಟುಕೊಳ್ಳಬೇಕು.

ಹಾಗೆಂದ ಮಾತ್ರಕ್ಕೆ ಸರ್ರನೆ ಕೆಳಗೆ ಬೀಳುವಂತೆ ಮಾಡಕೂಡದು. ಹಾಗಾದರೆ ತುಂಬಾ ತೊಂದರೆಯಾಗುವುದು. ಸ್ವಲ್ಪ ಬಿಗಿಯಾಗಿ, ಅಗತ್ಯವೆನಿಸಿದರೆ ಮಧ್ಯದಲ್ಲಿ ಚೆಂಡು ತುಸ ನಿಂತುಬಿಡುವಂತೆ ಟ್ಯೂಬನ್ನು ತಯಾರಿಸಬೇಕು. ಈ ಟ್ರಿಕ್‌ನಲ್ಲಿ ಇರುವುದೆಲ್ಲಾ ಇದೇ ರಹಸ್ಯ.

ಇಂದ್ರಜಾಲಕ ಪ್ರೇಕ್ಷಕರಿಗೆ ತೋರಿಸುವ ಚೆಂಡು ಒಂದೇ ಆದರೂ ನಿಜವಾಗಿ ಆತ ಮೂರು ಚೆಂಡುಗಳನ್ನು ಉಪಯೋಗಿಸುತ್ತಾನೆ. ಎರಡು ಬಿಳಿಯವು, ಒಂದು ನೀಲಿ ಬಣ್ಣದ್ದು. ಈ ಪಕ್ಕದ ಚಿತ್ರದಲ್ಲಿ ನೋಡಿದರೆ ಅದು ಸುಲಭವಾಗಿ ಅರ್ಥವಾಗುವುದು. ಇಂದ್ರಜಾಲಕನು ಮೊದಲು ನಿಕ್ಕಲ್ ಟ್ಯೂಬಿನಲ್ಲಿ ಕೆಳಗೆ ಒಂದು ಬಿಳಿ ಚೆಂಡನ್ನೂ ಅದರ ಮೇಲೊಂದು ನೀಲಿಚೆಂಡನ್ನೂ ಅಡಗಿಸಿಡಬೇಕು.

"ಇದೋ ಟ್ಯೂಬಿನಲ್ಲಿ ಏನೂ ಇಲ್ಲ" ಎಂದು ಹೇಳುತ್ತಾ ಮೇಲಿಂದ ಆ ಬಿಳಿಚೆಂಡನ್ನು ಸ್ವಲ್ಪ ತುರುಕಿ ಒಳಗೆ ಬಿಡುವನು. ಆದರೆ ಆ ಚೆಂಡು ಆ ಟ್ಯೂಬಿನಲ್ಲೇ ಇರುತ್ತದೆ. ಒತ್ತಡಕ್ಕೆ ಕೆಳಗೆ ಅಡಗಿಸಿಟ್ಟಿದ್ದ ಬಿಳಿಚೆಂಡು ಕೆಳಗೆ ಬೀಳುವುದು. ಮೊದಲು ತೋರಿಸಿದ ಚೆಂಡೇ ಕೆಳಗೆ ಬಿತ್ತೆಂದು ಪ್ರೇಕ್ಷಕರು ತಿಳಿದುಕೊಳ್ಳುವರು.

ಈ ಸಾರಿ ನೀಲಿ ಚೆಂಡು ಅಡಿಗೆ ಬರುತ್ತದೆ ತಾನೇ? "ಈ ಬಿಳಿಚೆಂಡನ್ನು ನೀಲಿಚೆಂಡಾಗಿ ಬದಲಾಯಿಸುವೆನು ನೋಡಿ" ಎಂದು ಟ್ಯೂಬಿನಲ್ಲಿ ಚೆಂಡನ್ನು ತುರುಕಿ ಇಳಿಬಿಡುವನು. ಈಗ ಕೆಳಗಡೆ ಯಿದ್ದ ನೀಲಿಚೆಂಡು ಮಾತ್ರ ಕೆಳಗೆ ಬೀಳುವುದು. ಅಂದರೆ ಬಿಳಿಚೆಂಡುಗಳು ಎರಡೂ ಟ್ಯೂಬಿನಲ್ಲೇ ಇರುತ್ತವೆ ಎಂದಾಯಿತು. ಇನ್ನು ಮಿಕ್ಕ ವಿಷಯವೆಲ್ಲಾ ಸುಲಭವಾಗಿ ಗೊತ್ತಾಗುತ್ತದೆತಾನೆ! ಆದರೊಂದು ವಿಷಯ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಈ ಯುಕ್ತಿಯನ್ನು ಪ್ರೇಕ್ಷಕರಿಗೆ ಒಂದು ಸಾರಿಗಿಂತಲೂ ಹೆಚ್ಚು ಬಾರಿ ತೋರಿಸಬಾರದು. 'ಬಹಳ ಚೆನ್ನಾಗಿದೆ ಮತ್ತೊಂದು ಸಾರಿ ಮಾಡಿ' ಎಂದರೆ ನೀವು ಆನಂದದಿಂದ ಉಬ್ಬಿ ಹೋಗಿ ಎರಡನೇ ಸಾರಿ ಮಾಡಲೂ ಕೈ ಹಾಕಬೇಡಿ. ಜೋಕೆ!



ಪಾಠಕರು ಈ ಗಾರುಡಿಯನ್ನು ಕುರಿತು ಇನ್ನೂ ವಿವರಗಳನ್ನು ತಿಳಿದುಕೊಳ್ಳಬೇಕೆಂದರೆ, ಅವರು 'ಚಂದಮಾಮದ' ಹೆಸರು ಸೂಚಿಸಿ, ಪ್ರೊಫೆಸರ್ ಸರ್ಕಾರ್‌ರವರಿಗೆ ನೇರವಾಗಿ ಬರೆಯಬಹುದು. ಪತ್ರ ಇಂಗ್ಲೀಷ್ ಭಾಷೆಯಲ್ಲಿರಬೇಕಾದುದು ಅಗತ್ಯ. ಅವರ ಪತ್ತೆ:

ಪ್ರೊಫೆಸರ್ ಪಿ. ಸಿ. ಸರ್ಕಾರ್,
ಮೆಜಿಷಿಯನ್
12/3/A, ಜಮಿರ್ ಲೇನ್, ಬಾಲಿಗಂಜ್
ಕಲಕತ್ತಾ-19

## 'ಬಣ್ಣ ಹಾಕಿ' 6-ನೇ ಚಿತ್ರದ ಕಥೆ

ರಾಜಕುಮಾರನು ಮನೆ ಸೇರಿಕೊಂಡ ಕೂಡಲೇ ಧೂಪ ಹಾಕಲು ಆ ಗಿಣಿಯು ಪೂರ್ವದಂತೆ ರಾಜಕುಮಾರಿಯಾಗಿ ಬದಲಾಯಿಸಿತು. ಇದನ್ನು ಕಂಡು ಸಕಲರೂ ಆಶ್ಚರ್ಯಪಟ್ಟದು ಮಾತ್ರವಲ್ಲ, ಆನಂದಸಾಗರದಲ್ಲಿ ಮುಳುಗಿದರು.

ವಾಗ್ದಾನದ ಪ್ರಕಾರ ರಾಜಕುಮಾರನಿಗೆ ಆಕೆಯನ್ನು ಕೊಟ್ಟು ವೈಭವವಾಗಿ ವಿವಾಹ ಜರುಗಿತು. ಸ್ವಲ್ಪಕಾಲಕ್ಕೆ ಆ ದಂಪತಿಗಳಿಗೆ ಚಂದಮಾಮನಂತಹ ಒಂದು ಮಗು ಹುಟ್ಟಿತು. ಅದನ್ನು ನೋಡಿ ದಂಪತಿಗಳು ಮಾತ್ರವಲ್ಲ ರಾಜರಾಣಿಯರೂ ರಾಜ್ಯದ ಪ್ರಜೆಗಳೂ ಸಂತೋಷ ಭರಿತರಾದರು.

ಇಪ್ಪತ್ತೊಂದನೇ ದಿವಸದಲ್ಲಿ ಶಿಶುವನ್ನು ಬಂಗಾರದ ತೊಟ್ಟಿಲಲ್ಲಿಟ್ಟು ತೂಗುತ್ತಿದ್ದಳು ರಾಜಕುಮಾರಿ. ದಾಸಿಯರೂ ಅಲ್ಲೇ ಇದ್ದರು. ಆಗ ಎಲ್ಲಿಂದ ಬಂತೋ, ಒಂದು ಪಂಚವರ್ಣದ ಗಿಣಿಯು ಅಂತಃಪುರದೊಳಗೆ ಹಾರಿ ಬಂದಿತು. ಅದನ್ನು ಕಂಡು ರಾಜಕುಮಾರಿಗೆ ಸಂತೋಷವಾಯಿತು. ಅಷ್ಟರೊಳಗೆ ಆ ಗಿಣಿಯು ಮಾನವಭಾಷೆಯಲ್ಲಿ "ಮಗು ಕೊಡುವೆಯೋ, ಇಲ್ಲಾ ಪತಿ ಕೊಡುವೆಯೋ ?" ಎಂದು ಕೇಳಲಾರಂಭಿಸಲು ರಾಜಕುಮಾರಿಗೆ ಹೆದರಿಕೆ ಹುಟ್ಟಿ ತಕ್ಷಣ ತನ್ನ ಪತಿಗೆ ಹೇಳಿ ಕಳಿಸಿದಳು. ರಾಜಕುಮಾರನು ಕೂಡಲೇ ಬಂದು ವಿಷಯವನ್ನರಿತು "ನಿಜ, ಈ ಮಗು ಹುಟ್ಟಿದ ಸಂತೋಷದಲ್ಲಿ ಆ ಮಾತೇ ಮರೆತಿದ್ದೆ" ಎಂದು ಮೊದಲು ಬೆಟ್ಟದ ಆ ಮಹಾನುಭಾವನಿಗೆ ಕೊಟ್ಟ ವಾಗ್ದಾನ ವಿಷಯವನ್ನು ರಾಜಕುಮಾರಿಗೆ ತಿಳಿಸಿದನು.

ಆಗ ಆ ರಾಜಕುಮಾರಿಯು ಆ ಗಿಣಿಗೆ ನಮಸ್ಕರಿಸಿ "ಸ್ವಾಮಿ, ನನ್ನನ್ನು ಕಾಪಾಡಲೋಸುಗ ಎಷ್ಟೋ ಕಷ್ಟಪಟ್ಟು ಮಹಾನುಭಾವರಾದ ತಮ್ಮ ಸಹಾಯ ಪಡೆದು ವಾಗ್ದಾನಕೊಟ್ಟು ಬಂದರು ನನ ಪತಿ. ಪತಿಯನ್ನು ಬಿಟ್ಟು ಪತ್ನಿ ಈ ಲೋಕದಲ್ಲಿ ಮಾಡಬೇಕಾದುದೇನೂ ಇಲ್ಲ. ಅಂತೆಯೇ ಆತನನ್ನು ಬಿಟ್ಟು ನಾನು ಜೀವಿಸಲಾರೆ. ಮತ್ತು ತಮ್ಮ ವಾಕ್ಯದ ವರಪ್ರಸಾದ ರೂಪವಾಗಿ ಜನಿಸಿದೆ ಈ ಶಿಶು. ಕೊಟ್ಟ ಶಿಶುವನ್ನು ಮತ್ತೆ ತೆಗೆದುಕೊಳ್ಳುವುದು ಮಹಾತ್ಮರಿಗೆ ತರವೇ ? ದಯವಿಟ್ಟು ಮನ್ನಿಸಿರಿ. ನಾನು ಪತಿಯನ್ನೂ ತ್ಯಜಿಸಲಾರೆ, ಶಿಶುವನ್ನೂ ತ್ಯಜಿಸಲಾರೆ. ಇಲ್ಲದಿದ್ದರೆ ನನ್ನನ್ನು ಪುನಃ ಗಿಣಿಯನ್ನಾಗಿ ಮಾರ್ಪಡಿಸಿ ಬಿಟ್ಟು ನನ್ನ ಭರ್ತನನ್ನೂ ಶಿಶುವನ್ನೂ ಕೊಂಡೊಯ್ಯಿರಿ" ಎಂದು ಹೃದಯದ ಆವೇದನೆಯಿಂದ ಪ್ರಾರ್ಥಿಸಿಕೊಂಡಳು.

ಆಗ ಆ ಗಿಣಿಯು ನಿಜರೂಪದಿಂದ ಮಹಾನುಭಾವನಾಗಿ ಕಾಣಿಸಿಕೊಂಡು ರಾಜಕುಮಾರಿಯ ತ್ಯಾಗ ಬುದ್ಧಿಯನ್ನು ಮೆಚ್ಚಿಕೊಂಡು ಮುವ್ವರನ್ನೂ ಆಶೀರ್ವದಿಸಿ ಮಾಯವಾದನು. ಮತ್ತೊಮ್ಮೆ ಸರ್ವರೂ ಆನಂದಸಾಗರದಲ್ಲಿ ತೇಲಾಡಿದರು. —ಇಲ್ಲಿಗೆ ಈ ಕಥೆ ಸಂಪೂರ್ಣ.

# ಮುಖಚಿತ್ರ

ಒಂದುಸಲ ಪಾಂಡವರಲ್ಲಿ ಹಿರಿಯನಾದ ಧರ್ಮರಾಯನು ರಾಜಸೂಯಯಾಗ ನಡೆಸಲು ನಿಶ್ಚಯಿಸಿ ಸರ್ವ ಸಿದ್ಧತೆಗಳನ್ನು ಮಾಡತೊಡಗಿದನು. ಸರ್ವರಿಗೂ ಆಹ್ವಾನ ಕಳಿಸಿದನು ದ್ವಾರಕಿಗೆ ದೂತರನ್ನು ಕಳಿಸಿ ಆಪ್ತನಾದ ಶ್ರೀಕೃಷ್ಣನನ್ನು ಬರಮಾಡಿಸಿಕೊಂಡನು. ದಿಗ್ವಿಜಯಕ್ಕಾಗಿ ತಮ್ಮಂದಿರನ್ನು ನಾಲ್ಕು ದಿಕ್ಕಿಗೂ ಸೈನ್ಯ ಸಮೇತರಾಗಿ ಕಳಿಸಿ ಶತ್ರುರಾಜರನ್ನು ಜಯಿಸಿ ಹೇರಳ ಧನ ಧಾನ್ಯ ಕಪ್ಪಕಾಣಿಕೆಗಳೊಡನೆ ಇಂದ್ರಪ್ರಸ್ಥಕ್ಕೆ ಬರಮಾಡಿಸಿದನು. ಆದರೆ ಅತಿ ಪರಾಕ್ರಮಿಯಾದ ಮಗಧ ರಾಜ ಜರಾಸಂಧನು ಮಾತ್ರ ವಶನಾಗದೆ ಉಳಿದು ಹೆಮ್ಮೆಯಿಂದ ಅನೇಕ ದೇಶಗಳನ್ನು ತಾನೇ ಆಕ್ರಮಿಸಿ ರಾಜರನ್ನು ಸೆರೆಯಲ್ಲಿಡಿಸಿ ನಾನಾ ತೊಂದರೆಗಳನ್ನುಂಟು ಮಾಡುತ್ತಿದ್ದನು. ಮಹಾಬಲಶಾಲಿಯಾದ ಆತನನ್ನು ಎದುರಿಸುವವರೇ ಇರಲಿಲ್ಲ.

ಜರಾಸಂಧನನ್ನು ಜಯಿಸುವ ಉಪಾಯವನ್ನರಿತ ಶ್ರೀಕೃಷ್ಣನು ಕೂಡಲೇ ಭೀಮಾರ್ಜುನರೊಂದಿಗೆ ಬ್ರಾಹ್ಮಣ ವೇಷದಲ್ಲಿ ಗಿರಿವ್ರಜಕ್ಕೆ ಹೋಗಿ ಜರಾಸಂಧನನ್ನು ಕಂಡು "ರಾಜೇಂದ್ರಾ, ನಾವು ದೂರ ದೇಶದಿಂದ ಬಂದ ಅತಿಥಿಗಳು. ನೀನು ಅತಿಥಿ ಸೇವಾ ಧುರಂಧರನೆಂಬುದನ್ನು ಕೇಳಿ ನಿನ್ನಲ್ಲಿಗೆ ಬಂದಿದ್ದೇವೆ. ನಮ್ಮ ಕೋರಿಕೆ ನೆರವೇರಿಸಿಕೊಟ್ಟು ನಿನ್ನ ಬಿರುದು ಸಾರ್ಥಕಗೊಳಿಸಿಕೊ" ಎನ್ನಲು, ಜರಾಸಂಧನು "ಎಲೈ, ಬ್ರಾಹ್ಮಣೋತ್ತಮರೇ, ಯಾವ ಕೋರಿಕೆಯನ್ನಾದರೂ ಪೂರೈಸಲು ಸಿದ್ಧನಿದ್ದೇನೆ. ಕೇಳಿರಿ" ಎಂದು ಹೇಳಿದನು. ಆಗ ಕೃಷ್ಣನು "ನಾವು ಯುದ್ಧ ಕೋರಿ ಬಂದಿದ್ದೇವೆ. ಇದೋ, ನಾನೇ ನಿನ್ನ ಶತ್ರುವಾದ ಕೃಷ್ಣನು; ಈತನು ಭೀಮನು, ಈತನು ಅರ್ಜುನನು" ಎನ್ನಲು ಜರಾಸಂಧನು ಅಟ್ಟಹಾಸದಿಂದ "ಎಲೋ, ಹಿಂದೆ ಯುದ್ಧ ಮಾಡಲಾರದೆ ಸೋತು ಓಡಿಹೋದ ಹೇಡಿ ನೀನು, ನಿನ್ನೊಡನೆ ನನಗೆ ಯುದ್ಧವೆ? ಈ ಅರ್ಜುನ ಚಿಕ್ಕವ, ಭೀಮನೇ ನನಗೆ ಸರಿಸಮಾನ, ಆತನೊಡನೆಯೇ ಯುದ್ಧಮಾಡುವೆ" ಎಂದು ಹೇಳಿ, ಎರಡು ಗದೆ ತರಿಸಿ ಕೋಟೆ ಹೊರಗಿನ ಮಾಳದಲ್ಲಿ ಭೀಮನೊಡನೆ ಅತಿ ಭಯಂಕರವಾಗಿ ಯುದ್ಧವನ್ನಾರಂಭಿಸಿದನು.

ಆ ಯುದ್ಧವೈಖರಿಯನ್ನು ವರ್ಣಿಸಲಸಾಧ್ಯ. ಇಬ್ಬರೂ ಸಮಬಲರು. ಗದಾಯುದ್ಧ ಮಲ್ಲಯುದ್ಧ ಪ್ರವೀಣರು. ಗದೆಗಳನ್ನು ತಿರುಗಿಸಿ ಎದುರಾಳಿಯ ಮೇಲೆ ಪ್ರಯೋಗಿಸಿದಾಗ ಸಿಡಿಲಿನಂಥಾ ಶಬ್ದವಾಗುತ್ತಿತು. ನೋಡುವವರಿಗೆ ಭಯ ಭ್ರಮೆಗಳನ್ನುಂಟು ಮಾಡುತ್ತಿತ್ತು. ಕಡೆಗಿಬ್ಬರೂ ಗದೆ ಬಿಸುಟು ಮುಷ್ಟಿಪ್ರಹಾರಗಳಿಂದ ಮಲ್ಲಯುದ್ಧವನ್ನಾರಂಭಿಸಿದರು. ಮದದಾನೆಗಳಂತೆ ಇಬ್ಬರೂ ಗುದ್ದಾಡುತ್ತಿರಲು ಯಾರೂ ಸೋಲುವಂತೆ ಕಾಣಲಿಲ್ಲ ಆಗ ಜರಾಸಂಧನ ಹುಟ್ಟು ಪೂರ್ವೋತ್ತರಗಳನ್ನರಿತ ಕೃಷ್ಣನು ಭೀಮನಿಗೆದುರಾಗಿ ಕಾಣುವಂತೆ ನಿಂತು ಒಂದು ಮರದ ಸಣ್ಣರೆಂಬೆಯನ್ನು ಹಿಡಿದು ಎರಡು ಸೀಳಾಗಿ ಸೀಳಿ ಹಾಗೆ ಮಾಡಬೇಕೆಂದು ಕಣ್ಣುಸನ್ನೆಯಿಂದ ಉಪಾಯ ಸೂಚಿಸಿದನು. ಕೂಡಲೇ ಭೀಮನು ರೌದ್ರಾವೇಶದಿಂದ ಹೆಬ್ಬುಲಿಯಂತೆ ಎಗರಿ ಜರಾಸಂಧನನ್ನು ನೆಲಕ್ಕೆ ಕೆಡವಿ ಅವನ ಒಂದು ಕಾಲನ್ನು ತನ್ನ ಕಾಲಿನಲ್ಲಿ ಮೆಟ್ಟಿಕೊಂಡು ಇನ್ನೊಂದು ಕಾಲನ್ನು ಕೈಯಿಂದ ಹಿಡಿದು ಮೇಲಕ್ಕೆಳೆದು ದೇಹವನ್ನೆರಡು ಸೀಳಾಗಿ ಸಿಗಿದು ಬಿಟ್ಟನು. ಕೃಷ್ಣಾರ್ಜುನರು ಪರಮಾನಂದದಿಂದ ಭೀಮನನ್ನಾಲಂಗಿಸಿದರು. ಮತ್ತು ಸೆರೆಯಾಗಿದ್ದ ರಾಜರನ್ನು ಬಿಡಿಸಿ ಜರಾಸಂಧನ ಮಗನಿಗೆ ಪಟ್ಟ ಕಟ್ಟಿ ಅಮೂಲ್ಯ ಕಪ್ಪಕಾಣಿಕೆಗಳೊಡನೆ ಇಂದ್ರಪ್ರಸ್ಥಕ್ಕೆ ಹಿಂತಿರುಗಿದರು.

# ಸಿಟ್ಟಿನ ಭಟ್ಟರು

ಒಂದಾನೊಂದು ಊರಿನಲ್ಲಿ ಬ್ರಾಹ್ಮಣರೊಬ್ಬರು ಇದ್ದರು. ಆ ಊರಿನ ದೇವಸ್ಥಾನದಲ್ಲಿನ ಪೂಜೆಯ ಭಟ್ಟರಾದುದರಿಂದ ಅವರ ಜೀವನ ಸುಖವಾಗಿ ಸಾಗುತಿತ್ತು. ಭಟ್ಟರಿಗೆ ಸಿಟ್ಟು ಬಹಳ ಜಾಸ್ತಿ. ಮೂಗಿನ ತುದಿಯಲ್ಲೇ ಕೋಪ. ಏನಾದರೊಂದು ಪ್ರಶ್ನೆ ಅಥವಾ ಮಾತು ಎರಡು ಬಾರಿ ಕೇಳಿದರೆ ಸಾಕು, ಅವರ ಮೇಲೆ ಉರಿದು ಬೀಳುತಿದ್ದರು. ಇದರಿಂದಾಗಿ ಆ ಊರಿನ ಜನರೆಲ್ಲ ಅವರಿಗೆ ಸಿಟ್ಟಿನ ಭಟ್ಟರೆಂದು ಉಪನಾಮವನ್ನಿಟ್ಟಿದ್ದರು.

ಒಂದು ದಿನ ಭಟ್ಟರಿಗೆ ರಾಮೇಶ್ವರಕ್ಕೆ ಹೋಗುವ ಆಶೆಯಾಯಿತು. ಆದರೆ ಯಾವ ಹರಕೆ ಹೇಳಲಿ ಎಂದು ಯೋಚನೆಗೆ ತೊಡಗಿದರು. ಯೋಚಿಸಿ ಯೋಚಿಸಿ ಪ್ರಯಾಸಪಟ್ಟ ಭಟ್ಟರಿಗೆ ಕೊನೆಗೊಂದು ಯುಕ್ತಿ ತೋರಿತು. "ತನ್ನನ್ನೆಲ್ಲಾ ಜನರು ದೂಷಿಸುತ್ತಾರೆ. ಯಾಕೆ? ಕೇವಲ ತನ್ನಲ್ಲಿ ಒಂದು ದುರ್ಗುಣವಾದ ಸಿಟ್ಟಿಗಾಗಿ! ಆ ಸಿಟ್ಟನ್ನೇ ರಾಮೇಶ್ವರದಲ್ಲಿ ಬಿಟ್ಟು ಬಂದರೆ ಸರಿ! ಹರಕೆ ಕೊಟ್ಟಹಾಗೂ ಆಯಿತು, ದೇವರನ್ನೂ ಕಂಡಂತಾಯಿತು, ಸಿಟ್ಟು ತೊಲಗಿ ಹೋದಂತೆಯೂ ಸರಿ!" ಎಂದು ಒಂದು ದಿನ ಶುಭ ಮುಹೂರ್ತದಲ್ಲಿ ನೆರೆಯ ಜನರನ್ನೆಲ್ಲಾ ಕರೆದು ತನ್ನ ಹರಕೆಯನ್ನೂ ತಾನು ಹೋಗತಕ್ಕ ವಿಷಯವನ್ನೂ ತಿಳಿಸಿ ಹೊರಟು ಹೋದರು.

ದಾರಿಯಲ್ಲೆಲ್ಲಾ ಭಟ್ಟರು ತಮ್ಮ ಸಿಟ್ಟನ್ನು ಬಿಗಿ ಹಿಡಿದು ಜನರೊಡನೆ ಮಾತನಾಡಿಕೊಂಡು ದೈವದೇವಸ್ಥಾನಗಳನ್ನು ನೋಡಿಕೊಂಡು ಸುಖವಾಗಿ ರಾಮೇಶ್ವರಕ್ಕೆ ಬಂದು ಮುಟ್ಟಿದರು. ಅಂದು ಕೆರೆಯಲ್ಲಿ ಮಿಂದು ಮಡಿಯುಟ್ಟುಕೊಂಡು ದೇವಸ್ಥಾನವನ್ನು ಸೇರಿ ದೇವರ ಮುಂದೆನಿಂತು ಭಕ್ತಿಯಿಂದ ಇನ್ನುಮುಂದೆ ತಾನು ಯಾರೊಡನೆಯೂ ಸಿಟ್ಟಿನಿಂದ ಮಾತನಾಡಲಿಕ್ಕಿಲ್ಲವೆಂದು ಸಾಷ್ಟಾಂಗ ನಮಸ್ಕಾರಮಾಡಿ ಸಿಟ್ಟನ್ನು ಅಲ್ಲಿಯೇ ಬಿಟ್ಟು ಹೋಗುವುದಾಗಿ ಬೇಡಿಕೊಂಡು ಹರಕೆ ಸಲ್ಲಿಸಿ ಹಿಂತಿರುಗಿದರು.

ಹರಕೆ ಕೊಟ್ಟು ಹಿಂದಿರುಗಿಬಂದ ಭಟ್ಟರನ್ನು ಕಂಡು ಜನರಿಗೆಲ್ಲ ಬಹಳ ಸಂತೋಷವಾಯಿತು. ಅವರು ನೋಡಿಕೊಂಡು ಬಂದ ವಿಚಿತ್ರ ವಿಷಯಗಳನ್ನೆಲ್ಲ ಕೇಳಿ ಆನಂದಿಸಿದರು. ಭಟ್ಟರ ಆಗಿನ ಮಾತುಗಳನ್ನು ಕೇಳಿ ನಿಜಕ್ಕೂ ಅವರು ಸಿಟ್ಟು ಬಿಟ್ಟು ಬಂದಿರುವರೆಂದು ತೋರಿತು ಜನರಿಗೆ. ಆಮೇಲೆ ಅವರು ಭಟ್ಟರನ್ನು ಪರೀಕ್ಷಿಸುವ ಗೋಜಿಗೆ ಹೋಗಲಿಲ್ಲ.

ಹೀಗೇನೇ ಕೆಲವು ದಿನಗಳು ಕಳೆದುವು. ಯಾವಾಗಲೂ ಭಟ್ಟರು ಸಿಟ್ಟನ್ನು ತಡೆದುಕೊಂಡು ಬಹಳ ನಮ್ರತೆಯಿಂದ ಜನರೊಡನೆ ಮಾತನಾಡುತಿದ್ದರು. ಒಂದು ದಿನ ಒಬ್ಬ ಹುಡುಗ ಭಟ್ಟರ ಮನೆಗೆ ಬಂದ. ಮಧ್ಯಾಹ್ನವಾದುದರಿಂದ ಭಟ್ಟರು ಮನೆಯೊಳಗೆ ಇದ್ದರು. ಬಿಸಿಲ ಬೇಗೆಗೆ ನಿದ್ದೆಯ ಜೊಂಪು ಹತ್ತುತ್ತಾ ಇತ್ತು ಅವರಿಗೆ. ಭಟ್ಟರಲ್ಲಿ ಸಿಟ್ಟು ಇನ್ನೂ ಇದೆಯೋ, ಇಲ್ಲವೇ, ಎಂದು ಪರೀಕ್ಷಿಸಲು ಒಂದು ಯುಕ್ತಿ ಹೂಡಿದ ಹುಡುಗ. ಮನೆಯ ಚಾವಡಿಯಲ್ಲಿ ತೂಗ ಹಾಕಿದ್ದ ಒಂದು ಚಿತ್ರದ ಕಡೆ ಬೊಟ್ಟುಮಾಡಿ, "ಇವಾರ ಚಿತ್ರ ಭಟ್ಟರೇ?" ಎಂದು ಕೇಳಿದ. ಭಟ್ಟರು ಚಿತ್ರನೋಡಿ, "ನನ್ನ ತಂದೆ ತಾಯಂದಿರು" ಎಂದು ಉತ್ತರಿಸಿದರು. ಸರಿ! ಹುಡುಗ ಸುಮ್ಮನಾಗಿ ಬೇರೆ ಚಿತ್ರಗಳನ್ನು ನೋಡಿಕೊಂಡು ಪುನಃ ಅದೇ ಚಿತ್ರದ ಬಳಿಗೆ ಬಂದು,

"ಇದಾರ ಚಿತ್ರಾಂತ ಹೇಳಿದ್ದು ಭಟ್ಟರೇ?" ಎಂದು ಕೇಳಿದ. ಭಟ್ಟರು, "ಆಗಲೇ ಹೇಳಿಲ್ವೇ, ನಮ್ಮ ತಂದೆ ತಾಯಂದಿರದೂಂತ" ಎಂದು ಸ್ವಲ್ಪ ಗಡುಸಾಗಿಯೇ ಉತ್ತರಿಸಿದರು. ಹುಡುಗ ಅಲ್ಲಿಂದ ಹಿಂತಿರುಗಿ ಉಳಿದ ಚಿತ್ರಗಳನ್ನೆಲ್ಲ ನೋಡಿ ಅವೆಲ್ಲಾ ಯಾರ್ಯಾರವೆಂಬುದನ್ನು ಕೇಳಿಕೊಂಡು ಇನ್ನೊಮ್ಮೆ ಮೊದಲಿನ ಅದೇ ಚಿತ್ರದ ಸಮಿಪಕ್ಕೆ ಬಂದು, "ಮರೆತೇ ಬಿಟ್ಟೆ ಭಟ್ಟರೆ, ಇದು ಯಾರ ಚಿತ್ರ ಅಂದಿರಿ ಆಗ?" ಎಂದು ಕೇಳಿಯೇಬಿಟ್ಟ. ನಿದ್ದೆಯ ಜೊಂಪು ಹತ್ತುತ್ತಿದ್ದ ಭಟ್ಟರಿಗೆ ಕೋಪ ತಲೆಗೇರಿತು. ನಿದ್ರೆ ಮಾಡುತಿದ್ದ ತನ್ನನ್ನು ಎಚ್ಚರಿಸಿದ್ದು; ಕೇಳಿದ ಪ್ರಶ್ನೆಯನ್ನೆಲ್ಲ ಇನ್ನೊಮ್ಮೆ ಕೇಳಿದುದು ಬೇರೆ. ಸಿಟ್ಟು ತಡೆಯಲಾರದೆ ಭಟ್ಟರು ಎದ್ದು ಛಳೀರೆಂದು ಹುಡುಗನ ಕೆನ್ನೆಗೆ ಏಟು ಕೊಟ್ಟರು. ಪೆಟ್ಟು ಬಿದ್ದಿದ್ದೇ ತಡ ಅರಚುತ್ತಾ ಹುಡುಗ ಬೀದಿಗೆ ಇಳಿದ. ಜನರೆಲ್ಲ ಗಲಾಟೆ ಕೇಳಿ ಗುಂಪು ಸೇರಿದರು. ಹುಡುಗನನ್ನು ವಿಚಾರಿಸಿದಾಗ ಭಟ್ಟರು ಸಿಟ್ಟನಿಂದ ಹೊಡೆದ ರೆಂದು ಹೇಳಿದನು. ಜನರಿಗೆಲ್ಲ ಭಟ್ಟರು ಕೋಪ ಬಿಟ್ಟು ಬಂದಿದ್ದು ಶುದ್ಧ ಸುಳ್ಳೆಂದು ಈಗ ತಿಳಿಯಿತು. ಭಟ್ಟರಿಗೆ ತಮ್ಮ ಅವಿವೇಕಕ್ಕೆ ನಾಚಿಕೆಯಾಯಿತು.

---

## ವೀರ ಜವಹರಲಾಲಜೀ

ಭಾರತ ಮಾತೆಯ।
ವೀರ ಸುಪುತ್ರನು।
ಏರಿದ ಕೀರ್ತಿಯ ಶಿಖರವನು॥

ಹಿಂದೂ ದೇಶದ।
ಬಂಧನ ಬಿಡಿಸಿದ।
ಗಾಂಧೀ ತತ್ವವನನುಸರಿಸಿ॥

ಕತ್ತಲೆ ಕೊಳೆ ಭಯ।
ಮುತ್ತಿರೆ ಕಳೆದನು।
ಹೊತ್ತಿಸಿ ಸತ್ಯಾಗ್ರಹ ಸೊಡರ॥

ಕಾಂತಿಯ ಹಬ್ಬಿಸಿ।
ಕ್ರಾಂತಿಯನೆಬ್ಬಿಸಿ।
ಶಾಂತಿಯ ಚಳವಳ ಮುನ್ನಡೆಸಿ॥

ಜನತಾ ರಾಜ್ಯವ।
ಗಣಸಾಮ್ರಾಜ್ಯವ।
ಜನನಿಗೆ ಸ್ವಾತಂತ್ರವ ತಂದು॥

ಉತ್ತಮ ಸಚಿವನೆ।
ಸುತ್ತಲಿ ಬಿರುದನೆ।
ಪೊತ್ತಿಹ ಸತ್ಯಾತ್ಮಕ ನೆಹರು॥

ಬಾಲಕರೊಳು ಪ್ರಿಯ।
ಲೀಲೆಯ ನಾಡುವ।
ಲಾಲಜವಾಹರ ವರ ನೆಹರು॥

ದೀನರ ದಲಿತರ।
ಮಾನಸದೊಲವಿನ।
ಜ್ಞಾನಿಯು ಧರ್ಮಿಯು ಘನ ನೆಹರು॥

ನಮಿಸುವೆವಿಂದಿನೊ।
ಅಮಿತಾನಂದದಿ।
ಮಮತೆಯ ಮೂರುತಿ ಜವಹರಗೆ॥

ಜಯ ಜಯ ನೆಹರು।
ಜಯ ಹಿಂದ್ ನೆಹರು।
ಜಯಮಂಗಲ ಸುಖದಾಯಕ ನೆಹರು॥

—ಪುಟ್ಟ.

